RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– *I* | ಬೆಂಗಳೂರು, ಮಂಗಳವಾರ, ಮೇ ೩, ೨೦೧೬ (ವೈಶಾಖ ೧೩, ಶಕ ವರ್ಷ ೧೯೩೮) | ನಂ. ೭೦೬ |
| ***Part–I*** | ***Bengaluru, Tuesday, May 3, 2016 (Vaishaka 13, Shaka Varsha 1938)*** | ***No. 706*** |

**ಕಾರ್ಮಿಕ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಆರ್ಥಿಕ ಬೆಂಬಲದೊಂದಿಗೆ "ಭಾರತರತ್ನ ಸರ್ ಎಂ ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿ" ಯನ್ನು ಸ್ಥಾಪಿಸಲು ಹಾಗೂ ಓಬದೇನಹಳ್ಳಿಯಲ್ಲಿ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಮೆ:ಹಿಂದೂಸ್ಥಾನ್ ಸ್ಟೀಲ್ ವರ್ಕ್ಸ್ ಕನ್‌ಸ್ಟ್ರಕ್ಷನ್ ಲಿಮಿಟೆಡ್ (HSCL) ಸಂಸ್ಥೆಗೆ ವಹಿಸಿರುವ ಸಂಬಂಧ ಕಾಮಗಾರಿ ಕೈಗೊಳ್ಳುವ ಬಗ್ಗೆ ಪರಿಷ್ಕೃತ ಆದೇಶ.**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಾಇ 276 ಎಲ್‌ಇಟಿ 2013 ದಿನಾಂಕ:18.01.2014.
2) ಸರ್ಕಾರದ ಆದೇಶ ಸಂಖ್ಯೆ: ಕಾಇ 276 ಎಲ್‌ಇಟಿ 2013 ದಿನಾಂಕ:16.12.2015.
3) ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಡಬ್ಲ್ಯೂಬಿ/ಎನ್‌ಸಿಎ/ಐಎನ್‌ಎಸ್‌ಟಿ/ಸಿಆರ್–02/2015–16 ದಿನಾಂಕ:26.03.2016.

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಲಭ್ಯವಿರುವ ನಿಧಿಗಳನ್ನು ಬಳಸಿಕೊಳ್ಳುವ ಮೂಲಕ ಕಾರ್ಮಿಕ ಇಲಾಖೆಯ ಸಂಯುಕ್ತ ಆಶ್ರಯದಲ್ಲಿ ಹಾಗೂ ರಾಜ್ಯ ಆಯವ್ಯಯದ ನೆರವನ್ನು ಕೋರದೆ ಭೂಮಿಯು ಸೇರಿದಂತೆ ಅಗತ್ಯ ಮೂಲ ಸೌಲಭ್ಯದೊಂದಿಗೆ ರೂ.250 ಕೋಟಿಗಳ ಉದ್ದೇಶಿತ ವೆಚ್ಚದಲ್ಲಿ ಬೆಂಗಳೂರಿನಲ್ಲಿ ಭಾರತ ರತ್ನ ಸರ್.ಎಂ.ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಸ್ಥಾಪನೆಯನ್ನು ಜರ್ಮನ್ ಟೆಕ್ನಿಕಲ್ ಕೋ–ಆಪರೇಷನ್–ಇಂಟರ್‌ನ್ಯಾಷನಲ್ ಸರ್ವಿಸಸ್ (GIZ-IS) ಸಂಸ್ಥೆಗೆ ವಹಿಸಿ ಆದೇಶಿಸಲಾಗಿತ್ತು.

2. ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಾಇ 276 ಎಲ್‌ಇಟಿ 2015 ದಿನಾಂಕ: 18.01.2014 ನ್ನು ಭಾಗಶಃ ಮಾರ್ಪಡಿಸಿ ಓಬದೇನಹಳ್ಳಿಯಲ್ಲಿ **ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿ**ಯ ಸ್ಥಾಪನೆ ಬಗ್ಗೆ ಜರ್ಮನ್ ಟೆಕ್ನಿಕಲ್ ಕೋ–ಆಪರೇಷನ್–ಇಂಟರ್‌ನ್ಯಾಷನಲ್ ಸರ್ವಿಸಸ್ (GIZ-IS) ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲು ಹಾಗೂ **ಓಬದೇನಹಳ್ಳಿಯಲ್ಲಿ ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಕಟ್ಟಡ ಕಾಮಗಾರಿಯನ್ನು ಮೆ: ಹಿಂದೂಸ್ಥಾನ್ ಸ್ಟೀಲ್ ವರ್ಕ್ಸ್ ಕನ್‌ಸ್ಟ್ರಕ್ಷನ್ ಲಿಮಿಟೆಡ್ (HSCL) ಸಂಸ್ಥೆಯ "ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್‌ಟೆಂಟ್" ಆಗಿ ನಿರ್ವಹಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿತ್ತು.**

3. ಅಲ್ಲದೆ, ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಕಟ್ಟಡ ಕಾಮಗಾರಿಗೆ ಮೆ: ಹಿಂದೂಸ್ಥಾನ್ ಸ್ಟೀಲ್ ವರ್ಕ್ಸ್ ಕನ್‌ಸ್ಟ್ರಕ್ಷನ್ ಲಿಮಿಟೆಡ್ (HSCL) ಇವರ ಸೇವೆಯನ್ನು ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಸೆಕ್ಷನ್ 4(ಜಿ) ಅಡಿಯಲ್ಲಿ ವಿನಾಯಿತಿ ನೀಡಲಾಗಿತ್ತು ಹಾಗೂ ಸಮಾಲೋಚನಾ ಶುಲ್ಕ (consultancy charges) ವನ್ನು ಶೇ.5 ರಷ್ಟಕ್ಕೆ ಮಾತ್ರ ಸೀಮಿತಗೊಳಿಸುವ ನಿಟ್ಟಿನಲ್ಲಿ ಮೆ.

ಹಿಂದೂಸ್ಥಾನ್ ಸ್ಟೀಲ್ ವರ್ಕ್ಸ್ ಕನ್‌ಸ್ಟ್ರಕ್ಷನ್ ಲಿಮಿಟೆಡ್ (HSCL) ರವರೊಂದಿಗೆ ಸಂಧಾನ ನಡೆಸಲು ಹಾಗೂ ಸದರಿಯವರು ತಯಾರಿಸಬಹುದಾದ ಯೋಜನಾ ಅಂದಾಜು ವೆಚ್ಚವನ್ನು ಮೂರನೇ ಪಕ್ಷಕಾರರಿಂದ ಪರಾಮರ್ಶಿಸಿಕೊಳ್ಳಲೂ ಸಹ ಆದೇಶಿಸಲಾಗಿತ್ತು.

4. ಮುಂದುವರೆದು, ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಸ್ಥಾಪನೆಗೆ ಸಂಬಂಧಿಸಿದಂತೆ ಸಂಪೂರ್ಣ ಯೋಜನೆಯ ಸಮನ್ವಯಕ್ಕಾಗಿ ಕಾರ್ಮಿಕರ ಮತ್ತು ಸಾಮಾಜಿಕ ವಲಯದಲ್ಲಿ ಅನುಭವ ಹೊಂದಿರುವ ಸರ್ಕಾರದ ಕಾರ್ಯದರ್ಶಿಯವರ ಮಟ್ಟದ ನಿವೃತ್ತ ಐ.ಎ.ಎಸ್. ಅಧಿಕಾರಿಯವರ ಸೇವೆಯನ್ನು ಪಡೆಯಲೂ ಸಹ ಆದೇಶಿಸಲಾಗಿತ್ತು.

5. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮಂಡಳಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಓಬದೇನಹಳ್ಳಿಯಲ್ಲಿ ಭಾರತರತ್ನ ಸರ್.ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಸ್ಥಾಪನೆ ಕುರಿತು ಮಾಹಿತಿಯನ್ನು ಒದಗಿಸಿದ್ದು, ಅದರನ್ವಯ ಮೇಲ್ಕಂಡಂತೆ ಹೊರಡಿಸಿರುವ ಸರ್ಕಾರದ ಆದೇಶಗಳಲ್ಲಿ ಸ್ಪಷ್ಟನೆ ಇಲ್ಲದೆ ಗೊಂದಲ ಮೂಡಿಸುವಂತಿವೆ ಎಂದು ತಿಳಿಸುತ್ತಾ ಅಕಾಡೆಮಿಯ ಸ್ಥಾಪನೆ ಹಾಗೂ ನಿರ್ಮಾಣ ಕಾಮಗಾರಿಯ ಕುರಿತು ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

6. ಸರ್ ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿ ಸ್ಥಾಪನೆಗೆ ಸಂಬಂಧಿಸಿದಂತೆ ಈ ಮೇಲೆ ವಿವರಿಸಿರುವ ಸರ್ಕಾರಿ ಆದೇಶಗಳಲ್ಲಿ ಕೆಲವೊಂದು ಅಂಶಗಳ ಬಗ್ಗೆ ಸ್ಪಷ್ಟತೆ ಮತ್ತು ಬದಲಾದ ಸನ್ನಿವೇಶದಲ್ಲಿ ಯೋಜನಾ ವೆಚ್ಚಗಳ ಪುನರ್ ಪರಿಶೀಲನೆ ಹಿನ್ನೆಲೆಯಲ್ಲಿ ಅಕಾಡೆಮಿಯ ನಿರ್ಮಾಣವನ್ನು ರೂ.250ಕೋಟಿಗಳಲ್ಲಿ ನಿರ್ಮಿಸಬೇಕೆಂಬ ನಿರ್ಧಾರವನ್ನು ಮರು ಪರಿಶೀಲಿಸಿದ ನಂತರ ಇದನ್ನು ರೂ.346ಕೋಟಿಗಳಿಗೆ ಹೆಚ್ಚಿಸಲು ಮಂಡಳಿಯು ನಿರ್ಧರಿಸಿರುವುದನ್ನು ವಿವರಗಳೊಂದಿಗೆ ಈ ಹಿಂದಿನ ಸಚಿವ ಸಂಪುಟದ ಸಭೆಯಲ್ಲಿ ನಿರ್ಧರಿಸಿದಂತೆ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯನ್ನು PMC ಎಂದು ಕಾರ್ಯ ನಿರ್ವಹಿಸುವ ಬಗ್ಗೆ ನಿರ್ಧರಿಸಿದನ್ನು ಮಾರ್ಪಡಿಸಿ, ಇದೀಗ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆ PMC ಕಾರ್ಯ ನಿರ್ವಹಣೆಯ ಜೊತೆಗೆ ಮಂಡಳಿ ಹಾಗೂ ಸರ್ಕಾರದ ಪರವಾಗಿ ಸಂಪೂರ್ಣ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ನಿರ್ವಹಿಸಲು ನಿರ್ಧರಿಸಿರುವುದನ್ನು ಸಚಿವ ಸಂಪುಟದ ಮುಂದೆ ಸೂಕ್ತ ನಿರ್ಧಾರ ಕೋರಿ ಮಂಡಿಸಲು ತೀರ್ಮಾನಿಸಲಾಗಿದೆ ಹಾಗೂ ಅಕಾಡೆಮಿಯ ಸ್ಥಾಪನೆ, ಅದರ ನೋಂದಣಿ ಮತ್ತು ತರಬೇತಿ ಕಾರ್ಯಕ್ರಮಗಳನ್ನು ಒಳಗೊಂಡಂತಹ Vision Document ಮತ್ತು ಅಕಾಡೆಮಿಯ Bye-laws, Memorandum of Association ಇತ್ಯಾದಿ ಮಾಹಿತಿಗಳ ಬಗ್ಗೆ ದಿನಾಂಕ: 14–03–2016 ಮತ್ತು 21–03–2016ರಂದು ಮಾನ್ಯ ಕಾರ್ಮಿಕ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿ ನಿರ್ಧರಿಸಲಾಗಿರುತ್ತದೆ.

7. ಈ ಸಭೆಯಲ್ಲಿ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರನ್ನು ಯೋಜನಾ ನಿರ್ವಹಣಾ ಸಲಹೆಗಾರರನ್ನಾಗಿ ನೇಮಕ ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ Terms and Conditionsಗಳನ್ನು ಒಳಗೊಂಡ ಒಪ್ಪಂದವನ್ನು ಅಂತಿಮಗೊಳಿಸಲು ಹಾಗೂ ಕೆಲವೊಂದು ಮಹತ್ವದ ವಿಷಯಗಳ ಬಗ್ಗೆ ತೀರ್ಮಾನಿಸಲು ಸಭೆಯಲ್ಲಿ ಸುದೀರ್ಘ ಚರ್ಚೆ ನಡೆದು, ಈ ಕೆಳಕಂಡಂತೆ ತೀರ್ಮಾನಿಸಲಾಯಿತು.

(1) ಸರ್ ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿ ಸ್ಥಾಪನೆಗೆ ಸರ್ಕಾರವು ದಿನಾಂಕ: 18–01–2014ರಂದು ಹೊರಡಿಸಿದ ಆದೇಶದಲ್ಲಿ ಭೂಮಿಯ ಮೌಲ್ಯ, ಕಟ್ಟಡ ಕಾಮಗಾರಿ ವೆಚ್ಚ ಮತ್ತು ಅಕಾಡೆಮಿಯ ಸ್ಥಾಪನೆ ಮತ್ತು ನಿರ್ವಹಣೆ ಸೇರಿ ರೂ.250ಕೋಟಿಗಳಿಗೆ ಅನುಮೋದನೆ ದೊರೆತಿರುತ್ತದೆ. ಈ ಹಿಂದೆ ಅನುಮೋದನೆ ದೊರೆತ ಯೋಜನಾ ವೆಚ್ಚ ರೂ.250ಕೋಟಿಗಳನ್ನು ಹೆಚ್ಚು ಮಾಡಬೇಕಾಗುತ್ತದೆಂದು ಸಭೆಯು ನಿರ್ಧರಿಸಿತು. 2014ರಲ್ಲಿ ಕೇವಲ ಅಂದಾಜು ವೆಚ್ಚ ಎಂದು ಹೇಳಲಾಗಿತ್ತು. ಆಗ ಭೂಮಿಯ ಲಭ್ಯತೆಯಿರಲಿಲ್ಲ. ಈಗಿನ ಪರಿಸ್ಥಿತಿ ಮತ್ತು ಈ ಕೆಳಗಿನ ಕಾರಣಗಳು ಅಂದಾಜು ವೆಚ್ಚ ಹೆಚ್ಚಳಕ್ಕೆ ಕಾರಣವೆಂದು ನಿರ್ಧರಿಸಲಾಯಿತು.

(ಅ) 2012–13ನೇ ಸಾಲಿನಲ್ಲಿ ಮಂಡಿಸಿದ ಯೋಜನಾ ವೆಚ್ಚವು ಅಂದಿನ ಮಾರುಕಟ್ಟೆ ಬೆಲೆಯನ್ನು ಆಧರಿಸಿ ತಯಾರಿಸಲಾಗಿತ್ತು. ಈಗ ಮಂಡಿಸಲ್ಪಡುತ್ತಿರುವ ಅಂದಾಜು ಯೋಜನಾ ವೆಚ್ಚ/ ಕಾಮಗಾರಿ ವೆಚ್ಚವು 2015–16ನೇ ಸಾಲಿನ ಮಾರುಕಟ್ಟೆ ಬೆಲೆಯನ್ನು ಆಧರಿಸಿದೆ.

(ಆ) ನಿರ್ಮಾಣ ಸಾಮಾಗ್ರಿಗಳ ಬೆಲೆ ಮತ್ತು ವೇತನ ಹೆಚ್ಚಳವನ್ನು ಪರಿಗಣಿಸಲಾಗಿದೆ.

(ಇ) ಕಟ್ಟಡ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದ ಸುಂಕ ಹಾಗೂ ಇತರೆ ತೆರಿಗೆಗಳನ್ನು ಪರಿಗಣಿಸಿದೆ.

(ಈ) ಅಕಾಡೆಮಿ ನಡೆಸಲು ಬೇಕಾದ ಎಕ್ವಿಪ್‌ಮೆಂಟ್ ಹಾಗೂ ರೆಕರಿಂಗ್ ವೆಚ್ಚ ಸೇರಿಸಿಕೊಳ್ಳಲಾಗಿದೆ.

(ಉ) ಅಕಾಡೆಮಿಯಲ್ಲಿ ಕಾರ್ಪಸ್ ಫಂಡ್ ಸ್ಥಾಪಿಸಲು ನಿರ್ಧರಿಸಲಾಗಿದೆ.

8. ಈ ಕಾರಣಗಳ ಆಧಾರದ ಮೇಲೆ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಭರಿಸುವ ಯೋಜನಾ ವೆಚ್ಚವನ್ನು ರೂ.346ಕೋಟಿಗಳೆಂದು ಅಂದಾಜಿಸಲಾಗಿದೆ. ಇದರ ವಿವರ ಈ ಕೆಳಗಿನಂತಿದೆ.

**ಕೋಷ್ಟಕ**

**ಅಕಾಡೆಮಿ ಸ್ಥಾಪನೆಗೆ ಸಂಬಂಧಿಸಿದ ಯೋಜನಾ ವೆಚ್ಚದ ವಿವರ**

| Sl. No. | Details | Estimated Cost (in Crores) |
|---|---|---|
| 1 | Cost of land (20 acres) including cess, registration charges, stamp duty, etc., | 27.62 |
| 2 | Cost of construction of buildings, infrastructure including taxes | 258.82 |
| 3 | HSCL Service Charges @5% on serial no.2 above | 12.94 |
| 4 | Lab equipments, Machineries and other infrastructure required for operating the Academy (Non-recurring) | 25.00 |
| 5 | Functioning of the Academy including registration process, cost of training, faculty and supporting staff, maintenance of buildings and other operational costs Rs.20crores per year (recurring)* | 20.00 |
| 6 | Miscellaneous and rounding off | 1.62 |
| | **Grand Total** | **346.00** |

*ಅಕಾಡೆಮಿಯಲ್ಲಿ ಪೂರ್ಣ ಪ್ರಮಾಣದ ಕಾರ್ಯ ಚಟುವಟಿಕೆಗಳನ್ನು ಆರಂಭಿಸುವವರೆಗೂ ವಾರ್ಷಿಕವಾಗಿ ರೂ.20ಕೋಟಿಗಳನ್ನು ಮಂಡಳಿಯ ವತಿಯಿಂದ ಅಕಾಡೆಮಿಗೆ ಬಿಡುಗಡೆ ಮಾಡಬೇಕಾಗುವುದನ್ನು ಅಂಗೀಕರಿಸಲಾಗಿದೆ.

9. ದೊಡ್ಡಬಳ್ಳಾಪುರದ ಓಬದೇನಹಳ್ಳಿಯ 20 ಎಕರೆ ವಿಸ್ತಾರದ ಭೂಮಿಯಲ್ಲಿ ಸುಮಾರು 54,272.12 ಚ.ಮೀ.ಗಳ ಸ್ಥಳದಲ್ಲಿ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಉದ್ದೇಶಿಸಿದೆ. ಇಲ್ಲಿ ಶೈಕ್ಷಣಿಕ ಬ್ಲಾಕ್, ಪುರುಷ ಮತ್ತು ಮಹಿಳೆಯರ ವಿದ್ಯಾರ್ಥಿ ನಿಲಯ, ಮಲಗುವ ಕೋಣೆ, ಊಟದ ಕೊಠಡಿ, ಕಾರ್ಯಾಗಾರದ ಕೊಠಡಿ, ಅಧಿಕಾರಿಗಳಿಗೆ/ಸಿಬ್ಬಂದಿಗಳಿಗೆ ವಸತಿ ಗೃಹಗಳು, ಆರೋಗ್ಯ ಕೇಂದ್ರ ಮತ್ತು ಕ್ಯಾಂಟೀನ್ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತದೆ. ಇದಕ್ಕೆ ಒಟ್ಟು ರೂ.258.82ಕೋಟಿಗಳು ತಗಲುತ್ತದೆ.

(1) ಪ್ರತಿ ಶಿಬಿರಾರ್ಥಿಗೆ 4.00 ಚದರ ಮೀಟರ್‌ಗಳ ಸ್ಥಳ ಕಲ್ಪಿಸಿದ್ದಲ್ಲಿ ಪ್ರತಿ ಶಿಬಿರಾರ್ಥಿಗೆ ಅಕಾಡೆಮಿಯಲ್ಲಿ ತರಬೇತಿ ನೀಡಲು ರೂ.2.10ಲಕ್ಷಗಳ ವೆಚ್ಚ ತಗಲಬಹುದೆಂದು ಅಂದಾಜಿಸಲಾಗಿದೆ (ಕ್ಯಾಪಿಟಲ್ ಕಾಸ್ಟ್). ಅಕಾಡೆಮಿಯ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ರಾಷ್ಟ್ರೀಯ ನೀತಿ ನಿಯಮಗಳಿಗೆ ಅನುಗುಣವಾಗಿ ಅಂದರೆ AICTE, National Building code and Architects code for construction ಗಳನ್ನು ಆಧರಿಸಿ ಸಿದ್ಧಪಡಿಸಲಾಗಿದೆ.

(2) ಭೂಮಿಯ ಮೌಲ್ಯ, ನೋಂದಣಿ ಶುಲ್ಕ ಮುಂತಾದ ವೆಚ್ಚ ಸೇರಿ ಖರ್ಚಾಗಿರುವ ರೂ.27.62ಕೋಟಿಗಳು ಮತ್ತು ಅಕಾಡೆಮಿ ಸ್ಥಾಪನೆಗೆ (Institutionalization) ತಗಲಬಹುದಾದ ವೆಚ್ಚವನ್ನು ರೂ.45.00ಕೋಟಿಗಳಿಗೆ (ಕೋಷ್ಟಕದ ಕ್ರಮ ಸಂಖ್ಯೆ 4 ಮತ್ತು 5 ಸೇರಿದಂತೆ) ಸೀಮಿತಗೊಳಿಸಿ, ಕಟ್ಟಡ ನಿರ್ಮಾಣ ಕಾಮಗಾರಿಗೆ ರೂ.258.82ಕೋಟಿಗಳೆಂದು ಅಂದಾಜಿಸಿ ಸರ್ಕಾರಕ್ಕೆ ಸೂಕ್ತ ಪ್ರಸ್ತಾವನೆ ಸಲ್ಲಿಸಿ ಅನುಮೋದನೆ ಪಡೆಯುವುದು ಅವಶ್ಯಕವೆಂದು ನಿರ್ಧರಿಸಲಾಗಿರುತ್ತದೆ.

(3) ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರು ಒಪ್ಪಿಕೊಂಡಿರುವಂತೆ ಅಕಾಡೆಮಿ ಕಟ್ಟಡ ನಿರ್ಮಾಣ ಕಾಮಗಾರಿಗಳ ಅವಧಿಯನ್ನು ಒಪ್ಪಂದಕ್ಕೆ ಸಹಿಮಾಡಿದ ದಿನದಿಂದ 24 ತಿಂಗಳು ಎಂದು ನಿರ್ಣಯಿಸಲಾಗಿರುತ್ತದೆ.

(4) ಮಂಡಳಿಗೆ Performance Guaranteeಯನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯಿಂದ ಪಡೆಯಲು ಪ್ರಸ್ತಾಪಿಸಲಾಗಿದೆ. ಕಟ್ಟಡ ಅಂದಾಜು ವೆಚ್ಚ ರೂ.258.82ಕೋಟಿಗಳಾಗಿರುವುದರಿಂದ, ಈ ಮೊತ್ತದ ಶೇ.5ರಷ್ಟು ಅಂದರೆ ರೂ.12.94ಕೋಟಿ ಸಲಹಾ ಹಾಗೂ ನಿರ್ಮಾಣ ಜವಾಬ್ದಾರಿ ಶುಲ್ಕವಾಗುತ್ತದೆ. ಈ ಶುಲ್ಕದ ಮೇಲೆ ಶೇ.5ರಷ್ಟು ಅಂದರೆ ರೂ.64.70ಲಕ್ಷಗಳ Performance Guarantee ಅನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರು ಮಂಡಳಿಗೆ ಪಾವತಿ ಮಾಡಬೇಕೆಂದು ನಿರ್ಣಯಿಸಲಾಗಿರುತ್ತದೆ.

(5) ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ತನ್ನ ಪತ್ರ ದಿನಾಂಕ: 27–02–2016ಅನ್ನು ನೀಡಿರುವುದನ್ನು ಪರಿಗಣಿಸಿ, ಈ ಕೆಳಗಿನಂತೆ ನಿರ್ಧರಿಸಲಾಗಿರುತ್ತದೆ.

"ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ಅಕಾಡೆಮಿ ಸ್ಥಾಪನೆಗೆ ಯೋಜನಾ ನಿರ್ವಹಣಾ ಸಲಹೆಗಾರರಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಈ ಕಾಮಗಾರಿ ಅನುಷ್ಠಾನಗೊಳಿಸುವ ಏಜೆನ್ಸಿಯಾಗಿದ್ದು, ಇ–ಟೆಂಡರ್ ಮೂಲಕ Construction Agencyಯನ್ನು ಗುರುತಿಸಿ, Design and Drawings, Specifications, Tender Document, e-Tendering Process ಮತ್ತು Award of Work ಹಾಗೂ ನಿರ್ಮಾಣಕ್ಕೆ ಸಂಬಂಧಿಸಿದ ಇತರೆ ಕಾರ್ಯಗಳನ್ನು ಮಂಡಳಿಯ ಪರವಾಗಿ ಸ್ವತ: ತಾವೇ

ಅಂತಿಮಗೊಳಿಸಿ, ಕಟ್ಟಡ ಕಾಮಗಾರಿಯನ್ನು ಕೈಗೊಳ್ಳುವ ಪೂರ್ವದಲ್ಲಿ ಮಂಡಳಿಯ ಅನುಮೋದನೆ ಪಡೆದು ಮುಂದುವರೆಯಬೇಕೆಂದು ನಿರ್ಣಯಿಸಿ, ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರ ಕೋರಿಕೆಯಂತೆ ಯೋಜನೆಯ ಅನುಷ್ಠಾನಕ್ಕಾಗಿ ಮೂರು ಕಂತುಗಳಲ್ಲಿ Deposit Contribution ವ್ಯವಸ್ಥೆಯಡಿ escrow account ಮುಖಾಂತರ ನಿರ್ಮಾಣ ಕಾರ್ಯ ವಹಿಸಲು ಪ್ರಸ್ತಾಪಿಸಲಾಗಿರುತ್ತದೆ.

ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ಯೋಜನಾ ನಿರ್ವಹಣಾ ಸಲಹೆಗಾರರಾಗಿ ಕಾರ್ಯನಿರ್ವಹಿಸುವ ಪೂರ್ವದಲ್ಲಿ ತಾಂತ್ರಿಕ ಚಟುವಟಿಕೆಗಳಾದ ಭೂಮಿ ಗಡಿ ಗುರುತಿಸುವಿಕೆ, ಸಮೀಕ್ಷೆ, ಜಿಯೋ–ತಾಂತ್ರಿಕ ಕೆಲಸ, ನೀರು ಸರಬರಾಜು, ವಿದ್ಯುತ್ ಪೂರೈಕೆ, ತತ್ಸಂಬಂಧ ಕೆಲಸ ಕಾರ್ಯಗಳ ಜೊತೆಗೆ ಕಾರ್ಮಿಕ ಕಾನೂನುಗಳ ಅನುಸರಣೆ, ಕಾಮಗಾರಿಯ ಗುಣಮಟ್ಟ, ಕಾಮಗಾರಿ ನಿರ್ವಹಣೆಯ ದೃಢೀಕರಣ, ಕಟ್ಟಡ ಕಾಮಗಾರಿಯನ್ನು ಕೈಗೊಳ್ಳುವ ಸಂಸ್ಥೆಗೆ ಕಾಲಕಾಲಕ್ಕೆ ಹಣ ಬಿಡುಗಡೆ ಮಾಡುವುದು– ಈ ಎಲ್ಲಾ ಕೆಲಸ ಕಾರ್ಯಗಳಿಗೆ ಬೇಕಾಗುವ ಹಣವನ್ನು ಮಂಡಳಿಯಿಂದ ನೀಡಲ್ಪಡುವ Deposit Contributionನಿಂದ ಅವರು ಭರಿಸುವರು. ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ಮಂಡಳಿಗೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ Deposit Contribution ಆಧಾರದ ಮೇಲೆ ಕಾರ್ಯನಿರ್ವಹಿಸಲು ತಮ್ಮ ಸಮ್ಮತಿ ಸೂಚಿಸಿರುತ್ತಾರೆ. ಈ ವಿವರಣೆಯ ಹಿನ್ನೆಲೆಯಲ್ಲಿ ಹಾಗೂ ಕಟ್ಟಡ ಕಾಮಗಾರಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಮಂಡಳಿಯಲ್ಲಿ ತಾಂತ್ರಿಕ ತಂಡ ಇಲ್ಲದೆ ಇರುವ ಕಾರಣಕ್ಕಾಗಿ Deposit Contribution ಆಧಾರದ ಮೇಲೆ ಮೆ॥ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ಕಾರ್ಯ ವಹಿಸಲು ಪ್ರಸ್ತಾಪಿಸಲಾಗಿರುತ್ತದೆ."

(6) ಅಕಾಡೆಮಿ ಸ್ಥಾಪನೆಯ ಕಟ್ಟಡ ನಿರ್ಮಾಣ ಕಾಮಗಾರಿಯ ಜವಾಬ್ದಾರಿ ಹೊತ್ತಿರುವ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ಮಂಡಳಿಯು ವಿಶೇಷವಾಗಿ ಈ ಕಾರ್ಯಕ್ಕಾಗಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ತೆರೆಯುವ ಖಾತೆಯಲ್ಲಿ ಠೇವಣಿ ಇಡುವ ಮೊತ್ತದ ವಿವರದ ಬಗ್ಗೆ ಚರ್ಚೆ ನಡೆದು, ಈ ಕೆಳಕಂಡಂತೆ ನಿರ್ಣಯ ಕೈಗೊಳ್ಳಲಾಗಿರುತ್ತದೆ.

i. ಒಪ್ಪಂದಕ್ಕೆ ಸಹಿ ಹಾಕಿದ ತರುವಾಯ ಮಂಡಳಿಯು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಕಟ್ಟಡ ನಿರ್ಮಾಣ ಕಾಮಗಾರಿಯ ಅಂದಾಜು ವೆಚ್ಚ ರೂ.258.82ಕೋಟಿಗಳಲ್ಲಿ ಶೇ.10ರಷ್ಟು ಮೊತ್ತ ಅಂದರೆ ಅಂದಾಜು ವೆಚ್ಚ ರೂ.25.88ಕೋಟಿಯನ್ನು ಪ್ರಥಮ ಹಂತದ ಕಾರ್ಯಗಳಾದ Survey, Soil testing, Concept Drawing ಮುಂತಾದವುಗಳ ಖರ್ಚುಗಳನ್ನು ಭರಿಸಲು ಹಣ ಬಿಡುಗಡೆ ಮಾಡಲಾಗುವುದು. ಸಮಾನಂತರ ಮೊತ್ತಕ್ಕೆ ಅನುಗುಣವಾಗಿ ನೀಡುವ Bank Guarantee ಅನ್ನು ಪಡೆದ ನಂತರ ಈ ಮುಂಗಡ ಹಣವನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ಬಿಡುಗಡೆ ಮಾಡಲಾಗುವುದು.

ii. ಉಳಿದ ಶೇ.90ರಷ್ಟರ ಅಂದಾಜು ವೆಚ್ಚ ರೂ.232.94ಕೋಟಿಗಳನ್ನು ಮಂಡಳಿಯು ತರೆಯುವ ಖಾತೆಯಲ್ಲಿ ಈ ಕೆಳಗೆ ವಿವರಿಸಿರುವ ಮೂರು ಕಂತುಗಳಲ್ಲಿ ಆಧಾರದ ಮೇಲೆ ಬಿಡುಗಡೆ ಮಾಡಲಾಗುವುದು.

ಅ. ಮೊದಲನೇ ಕಂತನ್ನು Detailed Project Report and Concept Drawing ನೀಡಿದ ನಂತರ ಪ್ರಸ್ತುತ ಕಟ್ಟಡ ನಿರ್ಮಾಣಕ್ಕಾಗಿ ಖಾತೆಯಲ್ಲಿ ಇಡಲ್ಪಟ್ಟ 1/3ರಷ್ಟು ಹಣ ಅಂದರೆ ರೂ.77.65ಕೋಟಿಗಳನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಬಿಡುಗಡೆ ಮಾಡಲಾಗುವುದು.

ಆ. ಮೊದಲನೇ ಕಂತಿನಲ್ಲಿ ಬಿಡುಗಡೆ ಮಾಡಲಾದ ಹಣದ ಶೇ.85ರಷ್ಟು ಬಳಕೆ ಪ್ರಮಾಣ ಪತ್ರವನ್ನು ನೀಡಿದ ನಂತರ 1/3ರಷ್ಟು ಹಣ ಅಂದರೆ ರೂ.77.65ಕೋಟಿಗಳನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಬಿಡುಗಡೆ ಮಾಡಲಾಗುವುದು.

ಇ. ಮೊದಲನೇ ಮತ್ತು ಎರಡನೇ ಕಂತುಗಳಲ್ಲಿ ಬಿಡುಗಡೆ ಮಾಡಲಾದ ಹಣವನ್ನು ವಿಸ್ತೃತ ಅಂದಾಜು ವೆಚ್ಚದಿಂದ ಕಳೆದು (ಎರಡನೇ ಕಂತಿನ ಶೇ.85ರಷ್ಟು ಬಳಕೆ ಪ್ರಮಾಣ ಪತ್ರ ಪಡೆದ ನಂತರ), ಉಳಿದ ಮೊತ್ತವನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಬಿಡುಗಡೆ ಮಾಡಲಾಗುವುದು.

ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ಕಾಮಗಾರಿ ಅನುಷ್ಠಾನಗೊಳಿಸುವ ಏಜೇನ್ಸಿಯಾಗಿರುವುದರಿಂದ ಸಂಪೂರ್ಣ ನಿರ್ಮಾಣ ಕಾರ್ಯದ ಜವಾಬ್ದಾರಿಯನ್ನು ಹಾಗೂ ಇನ್ನಿತರೆ ಎಲ್ಲಾ ಜವಾಬ್ದಾರಿಗಳನ್ನು ವಹಿಸಿಕೊಳ್ಳಬೇಕೆಂದು ಸಭೆಯಲ್ಲಿ ತೀರ್ಮಾನಿಸಿ, ಮೇಲೆ ತಿಳಿಸಿರುವಂತೆ ಖಾತೆಯಲ್ಲಿ ಠೇವಣಿ ( ) ಇಡುವ ಮೂಲಕ ನಿರ್ಮಾಣ ಕಾರ್ಯ ನಿರ್ವಹಿಸಲು ಕ್ರಮವಹಿಸಬೇಕೆಂದು ಹಾಗೂ ಅನುಮೋದನೆಯ ನಂತರ ಒಡಂಬಡಿಕೆಗೆ ಸಹಿ ಮಾಡಲು ತೀರ್ಮಾನಿಸಲಾಯಿತು.

(7) ಮುಂದುವರೆದು, ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಅಂದಾಜು ವೆಚ್ಚದ ಶೇ.5ರಷ್ಟು ಅಂದರೆ ರೂ.12.94ಕೋಟಿಗಳ ಸಮಾಲೋಚನಾ ಶುಲ್ಕವನ್ನು ಈ ಕೆಳಗಿನಂತೆ ಸಂದಾಯ ಮಾಡಲು ಸಭೆಯು ನಿರ್ಣಯಿಸಿರುತ್ತದೆ.

i. ಶೇ.5ರ ಒಟ್ಟು ಶುಲ್ಕದ ಶೇ.10ರಷ್ಟು ಮೊತ್ತವನ್ನು ಮಂಡಳಿ ಮತ್ತು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯು ಒಪ್ಪಂದಕ್ಕೆ ಸಹಿ ಮಾಡಿದ ನಂತರ ಹಾಗೂ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯಿಂದ Performance Guarantee ಅನ್ನು ಪಡೆದ ನಂತರ ಬಿಡುಗಡೆ ಮಾಡುವುದು.

ii. ಒಟ್ಟು ಶುಲ್ಕದ ಶೇ.10ರಷ್ಟು ಮೊತ್ತವನ್ನು Award of Contract ವಿತರಿಸಿದ ನಂತರ ಬಿಡುಗಡೆ ಮಾಡುವುದು.

iii. ಒಟ್ಟು ಶುಲ್ಕದ ಶೇ.75ರಷ್ಟು ಮೊತ್ತವನ್ನು ಪ್ರತಿ ಹಂತದ ಕಟ್ಟಡ ಕಾಮಗಾರಿಯ ವೆಚ್ಚ ರೂ.10ಕೋಟಿಗಳಿಗೆ ತಲುಪಿದಾಗ ಅದರ ಬಾಬ್ತು ರೂ.40ಲಕ್ಷಗಳನ್ನು ಬಿಡುಗಡೆ ಮಾಡುವುದು.

iv. ಉಳಿದ ಶೇ.5ರಷ್ಟು ಶುಲ್ಕವನ್ನು Contract ಅವಧಿ ಪೂರ್ಣಗೊಂಡ ನಂತರ ಎಲ್ಲಾ ವಿಷಯಗಳ ಪರಿಶೀಲನೆ ನಡೆಸಿ ತೃಪ್ತಿಕರವೇ ಎಂದು ಪರಿಶೀಲಿಸಿ, ಧೃಢೀಕರಿಸಿದ ನಂತರ ಬಿಡುಗಡೆ ಮಾಡುವುದು.

10. ಸಭೆಯು ಅಂತಿಮವಾಗಿ ಈ ಕೆಳಕಂಡ ವಿಷಯಗಳನ್ನು ಅಳವಡಿಸಿ ಸೂಕ್ತ ತಿದ್ದುಪಡಿಯೊಂದಿಗೆ ಹೊಸ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ಪ್ರಸ್ತಾಪಿಸಿ ಈ ಬಗ್ಗೆ ಸೂಕ್ತ ಪ್ರಸ್ತಾವನೆ ಸಲ್ಲಿಸಬೇಕೆಂದು ನಿರ್ಣಯಿಸಿತು. ಅದರಂತೆ ಸಲ್ಲಿಸಲಾದ ಪ್ರಸ್ತಾವನೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಪರಿಶೀಲಿಸಲಾಗಿ, ಅವರ ಅಭಿಪ್ರಾಯದ ಪ್ರಮುಖ ಅಂಶಗಳು ಈ ಕೆಳಕಂಡಂತಿವೆ:

1. ಅಕಾಡೆಮಿಯನ್ನು ಸ್ಥಾಪಿಸಿ ನಂತರ ಕರ್ನಾಟಕ ರಿಜಿಸ್ಟ್ರೇಷನ್ ಆಫ್ ಸೊಸೈಟೀಸ್ ಕಾಯ್ದೆಯ ಅಡಿಯಲ್ಲಿ ನೊಂದಾಯಿಸುವುದು. ಇದಕ್ಕೆ ಪೂರಕವಾದ Memorandum of Association ಮತ್ತು ಬೈಲಾಗಳನ್ನು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆಯಿಂದ ಪರಿಷ್ಕರಿಸಬಹುದು.
2. ಅಕಾಡೆಮಿಯನ್ನು ಪ್ರಾರಂಭದಲ್ಲಿ ಎರಡು ವರ್ಷಗಳ ಕಾಲ ಬಾಡಿಗೆ ಕಟ್ಟಡದಲ್ಲಿ ಪ್ರಾರಂಭಿಸಿ, ಕೌಶಲ್ಯ ತರಬೇತಿ ವೃತ್ತಿಗಳಲ್ಲಿ ಅನುಭವ ಪಡೆದು ನಂತರ ಅಕಾಡೆಮಿಯ ಕಟ್ಟಡ ನಿಮಾಣ ಕಾರ್ಯವನ್ನು ಅವಶ್ಯಕತೆಗನುಗುಣವಾಗಿ ಕೈಗೆತ್ತಿಕೊಳ್ಳಬಹುದು.
3. ಪ್ರಸ್ತುತ ಪ್ರಸ್ತಾವನೆಯನ್ನು ಯೋಜನಾ ಇಲಾಖೆ, ಆರ್ಥಿಕ ಇಲಾಖೆ, ವಸತಿ ಇಲಾಖೆ, ಅಭಿವೃದ್ಧಿ ಆಯುಕ್ತರು, ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಮತ್ತು ವಲಯವಾರು ಕೌಶಲ್ಯ ಅಭಿವೃದ್ಧಿ ಪರಿಷತ್ (Sectoral Skill Council) ಪ್ರತಿನಿಧಿಗಳಿಂದ ಪರಾಮರ್ಶಿಸಬಹುದು.
4. ಕಟ್ಟಡ ನಿರ್ಮಾಣ ಮಂಡಳಿಯಿಂದ ನೊಂದಾಯಿತ ಅಕಾಡೆಮಿಗೆ ಹಣವನ್ನು ಠೇವಣಿ ಮುಖೇನ ವರ್ಗಾಯಿಸಬಹುದು. ಇದರಿಂದ ಮಂಡಳಿಯು ತ್ವರಿತವಾಗಿ ಹಣ ಖರ್ಚು ಮಾಡಿದಂತಗುತ್ತದೆ. ಆದರೆ, ಸದರಿ ಆತುರದ ನಿರ್ಧಾರವು ಸಮರ್ಥನೀಯವಾಗಿರುವುದಿಲ್ಲ ಮತ್ತು ಹಣದ ವ್ಯರ್ಥ ಪೋಲಾಗುತ್ತದೆ.
5. ಪ್ರಸ್ತುತ ಪ್ರಸ್ತಾವನೆಯನ್ನು ಮುಂದಕ್ಕೆ ತೆಗೆದುಕೊಂಡು ಹೋಗುವುದು ಅನಿವಾರ್ಯವಾದಲ್ಲಿ ಸಾಕಷ್ಟು ಮುನ್ನೆಚ್ಚರಿಕೆಯನ್ನು ಮಂಡಳಿಯು ತೆಗೆದುಕೊಳ್ಳತಕ್ಕದ್ದು. ನಿಗಧಿತ ಠೇವಣಿಯನ್ನು ತೊರೆದು ಬಡ್ಡಿ ಹಣ ಪೋಲಾಗುವುದನ್ನು ತಡೆಯಬೇಕು. Escrow Account ತೆರೆದು, ಸಂಬಂಧಿಸಿದ ಬ್ಯಾಂಕ್ ನೊಂದಿಗೆ ತ್ರಿಪಕ್ಷೀಯ ಒಪ್ಪಂದ ಸಹಿ ಮಾಡಿ ಬಡ್ಡಿ ದರವು ನಿರ್ಧಿಷ್ಟ ಯೋಜನೆಗೆ ಮಾತ್ರ ಸೀಮಿತವಾಗುವಂತೆ ನೋಡಿಕೊಳ್ಳಬಹುದು. ನಿರ್ಮಾಣ ಏಜೆನ್ಸಿಯಿಂದ ಸಾಕಷ್ಟು ಬ್ಯಾಂಕ್ ಗ್ಯಾರಂಟಿಯನ್ನು ಹಣ ಬಿಡುಗಡೆ ಮಾಡುವ ಮೊದಲು ಪಡೆದುಕೊಳ್ಳಬಹುದು.
6. ಕಟ್ಟಡ ನಿರ್ಮಾಣ ಅಕಾಡೆಮಿಯ ವಿಶೇಷಾಧಿಕಾರಿ ಮತ್ತು ಡಿ.ಜಿ. ಕಟ್ಟಡ ನಿರ್ಮಾಣ ಕ್ಷೇತ್ರದ / ಕೌಶಲ್ಯ ಅಭಿವೃದ್ಧಿ ಕ್ಷೇತ್ರದ ತಜ್ಞರಾಗಿರತಕ್ಕದ್ದು. ಅವರುಗಳನ್ನು ಮುಖ್ಯ ಕಾರ್ಯದರ್ಶಿಗಳು, ಅಭಿವೃದ್ದಿ ಆಯುಕ್ತರು, ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ ಇವರುಗಳನ್ನೊಳಗೊಂಡ ಆಯ್ಕೆ ಸಮಿತಿಯು ಯೋಗ್ಯತೆ ಆಧಾರದ ಮೇಲೆ ಗುರುತಿಸಬಹುದು.

11. ಈ ಪ್ರಸ್ತಾವನೆಯ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯವು ಈ ಕೆಳಕಂಡಂತಿದೆ:

1. The proposal of Labour Department for taking up construction of the Sir M. Visvesvaraya National Construction Academy was approved in Cabinet on 10.12.2015. At that time the Cabinet had agreed to give 4(G) exemption and allow nomination basis in favour of M/s. Hindustan Steelworks Construction Corporation Limited. Now after more than 4 months the present DCN has been submitted and it is seen that the work has not started. In such a case if time is not of essence, the Labour Department could have as well as gone though tender route to award this work instead of on a nomination basis to M/s. HSCC. Even now if the work in not urgent, the tender route may be considered. (HSCL).
2. The total project cost at the time of the last Cabinet approval on 10.12.2015 was Rs. 250 Crores of which the cost of construction was Rs. 187.8 Crores. In the present DCN the project cost has been increased to Rs. 346 Crores and the construction cost to Rs. 258.8 Crores. FD is of the opinion that the total project cost as well as construction cost should be limited to the earlier level approved by the Cabinet on 10.12.2015. The Labour Department is advised to restrict the total expenditure to the earlier limits.
3. In the earlier Cabinet approval to the M/s. HSSC (HSCL) was taken on nomination basis on project management consultancy basis (PMC basis). Whereas now the proposal has been changed to give it to M/s. HSCC (HSCL) on

deposit contribution basis. The logic for this change is not clear and FD is of the view that it may be continued on Project Management Consultancy basis.

4. It is also seen that preparatory activities to establish the Academy (which is a new organization/institution) has not progressed much. We may have a situation where the building will be ready but the institution will not be ready to run in this building. In the circumstances Labour Department may take all urgent steps to establish the institution first, even in a rented building and later move to the newly constructed building. Hence they may urgently start the institute in a small way in a rented building.

12. ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ ಹಾಗೂ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ರವರ ಅಭಿಪ್ರಾಯವನ್ನು ಮಾನ್ಯ ಕಾರ್ಮಿಕ ರಾಜ್ಯ ಸಚಿವರು ಒಪ್ಪದಿದ್ದ ಕಾರಣ ಮಾನ್ಯ ಕಾರ್ಮಿಕ ರಾಜ್ಯ ಸಚಿವರ ಅಭಿಪ್ರಾಯವನ್ನು ಸಚಿವ ಸಂಪುಟದ ತೀರ್ಮಾನಕ್ಕೆ ಸಲ್ಲಿಸಲು ತೀರ್ಮಾನಿಸಲಾಯಿತು.

13. ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ದಿನಾಂಕ:20.04.2016 ರಂದು ನಡೆದ ಸಚಿವ ಸಂಪುಟ ಸಭೆಯ ಅನುಮೋದನೆಯಂತೆ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 276 ಎಲ್ಇಟಿ 2013, ಬೆಂಗಳೂರು, ದಿನಾಂಕ:02–05–2016.**

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಆರ್ಥಿಕ ಬೆಂಬಲದೊಂದಿಗೆ "ಭಾರತರತ್ನ ಸರ್ ಎಂ ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿ" ಯನ್ನು ಸ್ಥಾಪಿಸಲು ಹಾಗೂ ದೊಡ್ಡಬಳ್ಳಾಪುರದ ಓಬದೇನಹಳ್ಳಿಯಲ್ಲಿ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಮೆ: ಹಿಂದೂಸ್ಥಾನ್ ಸ್ಟೀಲ್ ವರ್ಕ್ಸ್ ಕನ್‌ಸ್ಟ್ರಕ್ಷನ್ ಲಿಮಿಟೆಡ್ (HSCL) ಸಂಸ್ಥೆಗೆ ವಹಿಸಿರುವ ಸಂಬಂಧ ಕಾಮಗಾರಿ ನಿರ್ವಹಣೆ ಬಗ್ಗೆ ಈ ಹಿಂದೆ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಕಾಇ 276 ಎಲ್ಇಟಿ 2013 ದಿನಾಂಕ:18.01.2014 ಮತ್ತು ಕಾಇ 276 ಎಲ್ಇಟಿ 2013 ದಿನಾಂಕ:16.12.2015 ಗಳನ್ನು ಅಧಿಕ್ರಮಿಸಿ ಈ ಕೆಳಕಂಡ ಪರಿಷ್ಕೃತ ಅಂಶಗಳನ್ನೊಳಗೊಂಡಂತೆ ಸರ್ಕಾರದ ಅನುಮೋದನೆ ನೀಡಲಾಗಿದೆ.

i. ಸರ್ ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯನ್ನು ಸ್ಥಾಪಿಸಲು ಮತ್ತು ಕರ್ನಾಟಕ ರಿಜಿಸ್ಟ್ರೇಷನ್ ಆಫ್ ಸೊಸೈಟಿಸ್ ಆಕ್ಟ್‌ನ ಅಡಿಯಲ್ಲಿ ನೋಂದಣಿ ಮಾಡಿಸಿಕೊಂಡು, ಅಕಾಡೆಮಿಯ ಸ್ವಂತ ಕಟ್ಟಡ ಸಿದ್ಧವಾಗುವವರೆಗೆ ಇತರೆ ಸ್ಥಳದಲ್ಲಿ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲು ವಿಷನ್ ಡಾಕ್ಯುಮೆಂಟ್ ಪುಟ ಸಂಖ್ಯೆ 14 ರಲ್ಲಿನಂತೆ Operational Cost, training, staff & other consumables ನ್ನು ಅನುಮೋದಿಸಿದೆ.

ii. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಮತ್ತು ಅಕಾಡೆಮಿ ನಡುವೆ ಒಡಂಬಡಿಕೆ ಮಾಡಿಕೊಳ್ಳುವುದು.

iii. ದೊಡ್ಡಬಳ್ಳಾಪುರದ ಓಬದೇನಹಳ್ಳಿಯ 20 ಎಕರೆ ವಿಸ್ತಾರದ ಭೂಮಿಯಲ್ಲಿ ಸರ್ ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯಿಂದ ನಿರ್ವಹಿಸಲು ಅವರನ್ನು ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್‌ಟೆಂಟ್ ಆಗಿ ಮತ್ತು ಯೋಜನೆಯ ಅನುಷ್ಠಾನ ಜವಾಬ್ದಾರಿ ಸಂಸ್ಥೆಯನ್ನಾಗಿ ನೇಮಿಸಿಕೊಳ್ಳಲು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ)ರಡಿ ಸದರಿ ಸಂಸ್ಥೆಗೆ ಈ ಕಾರ್ಯಕ್ಕಾಗಿ ವಿನಾಯಿತಿಯನ್ನು ಹೆಚ್ಚಿನ ಮೊತ್ತಕ್ಕೆ ಸೇರಿಸಿ ವಿಸ್ತರಿಸುವುದು.

iv. ಅಕಾಡೆಮಿ ಸ್ಥಾಪನೆಗೆ ಸಂಬಂಧಿಸಿದಂತೆ ಈಗಾಗಲೇ ಹಂಚಿಕೆಯಾಗಿರುವ ಭೂಮಿಯ ಮೌಲ್ಯ, ನೊಂದಣಿ ಶುಲ್ಕ ಮುಂತಾದ ವೆಚ್ಚ ಸೇರಿ ಖರ್ಚಾಗಿರುವ ರೂ.27.62ಕೋಟಿಗಳು, ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ನೀಡಬೇಕಾಗಿರುವ ಶೇ.5ರಷ್ಟು ಸಲಹಾ ಶುಲ್ಕ ರೂ.12.94ಕೋಟಿಗಳು, ಇತರೆ ವೆಚ್ಚಗಳಿಗೆ ರೂ.1.62ಕೋಟಿಗಳು ಹಾಗೂ ಅಕಾಡೆಮಿಯ ಸ್ಥಾಪನೆಯ ಖರ್ಚಿಗಾಗಿ ಪ್ರಾರಂಭಿಕವಾಗಿ ಐದು ವರ್ಷಗಳ ಅವಧಿಗೆ ವಾರ್ಷಿಕ ರೂ.20.00ಕೋಟಿಗಳ ಅನುದಾನ ಹಾಗೂ ಸುವ್ಯವಸ್ಥಿತ ಸಲಕರಣೆಗಳು, ಯಂತ್ರೋಪಕರಣಗಳು, ಪ್ರಯೋಗಾಲಯ ವ್ಯವಸ್ಥೆಗೆ ಅವಶ್ಯವಿರುವ ಸಾಮಾಗ್ರಿಗಳನ್ನು ಖರೀದಿಸಲು ಒಂದು ಬಾರಿಯ ಕ್ಯಾಪಿಟಲ್ ಅನುದಾನ ರೂ.25.00ಕೋಟಿಗಳನ್ನು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಪಡೆಯಲು ಅನುಮೋದನೆ. ಮುಂದುವರೆದು ಕಟ್ಟಡ ನಿರ್ಮಾಣ ಕಾಮಗಾರಿಯನ್ನು ರೂ.258.82ಕೋಟಿಗಳು ಸೇರಿ ಒಟ್ಟು ಯೋಜನಾ ವೆಚ್ಚ ರೂ.346.00ಕೋಟಿಗಳೆಂದು ಅಂದಾಜಿಸಲಾಗಿರುವ ವೆಚ್ಚದಲ್ಲಿ ಕೈಗೊಳ್ಳುವುದು.

v. ಅಕಾಡೆಮಿ ಸ್ಥಾಪನೆಗೆ ಸಂಬಂಧಿಸಿದಂತೆ ಸಿದ್ಧಪಡಿಸಿರುವ 1)Vision Document, 2)MoA & Bye laws ಉಪ ನಿಯಮಗಳು) Rules and Regulations of the Academy ಯನ್ನು ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಅಂತಿಮಗೊಳಿಸುವುದು ಹಾಗೂ 3)Technical Detailsಗಳನ್ನು ಹೊಂದಿರುವ ಹೊತ್ತಿಗೆಯನ್ನು ಅನುಮೋದಿಸಿದೆ.

vi. ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಅಕಾಡೆಮಿ ಸ್ಥಾಪನೆಯ ಕಟ್ಟಡ ನಿರ್ಮಾಣ ಕಾಮಗಾರಿಗೆ ಯೋಜನಾ ನಿರ್ವಹಣಾ ಸಲಹೆಗಾರರಾಗಿ ಮತ್ತು ಯೋಜನೆಯ ಅನುಷ್ಠಾನ ಜವಾಬ್ದಾರಿ ಸಂಸ್ಥೆಯಾಗಿ

ಕಾರ್ಯನಿರ್ವಹಿಸಲಿರುವ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ನಿರ್ಮಾಣ ಕಾರ್ಯದ ಎಲ್ಲಾ ಜವಾಬ್ದಾರಿ ವಹಿಸಿ Deposit Contribution ವ್ಯವಸ್ಥೆಯಡಿ ಕಾರ್ಯನಿರ್ವಹಿಸುವುದು.

vii. ಅಕಾಡೆಮಿ ಸ್ಥಾಪನೆಯ ಕಟ್ಟಡ ನಿರ್ಮಾಣ ಕಾಮಗಾರಿಗೆ ಯೋಜನಾ ನಿರ್ವಹಣಾ ಸಲಹೆಗಾರರಾಗಿ ಮತ್ತು ಯೋಜನೆಯ ಅನುಷ್ಠಾನ ಜವಾಬ್ದಾರಿ ಸಂಸ್ಥೆಯಾಗಿ ಕಾರ್ಯನಿರ್ವಹಿಸಲಿರುವ ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಯವರಿಗೆ ಪರಿಷ್ಕೃತ ಅಂದಾಜು ವೆಚ್ಚದ ಶೇ.5ರಷ್ಟನ್ನು ಒಟ್ಟು ಶುಲ್ಕವನ್ನಾಗಿ ಮೇಲೆ ತಿಳಿಸಿರುವಂತೆ ಪ್ರಸ್ತಾವನೆಯ ಕಂಡಿಕೆ 9ರ ಉಪ ಕಂಡಿಕೆ 7ರನ್ವಯ ಮಂಡಳಿಯಿಂದ ನಾಲ್ಕು ಕಂತುಗಳಲ್ಲಿ ಹಣ ಸಂದಾಯ ಮಾಡುವುದು.

viii. ಕಾಮಗಾರಿ ಅವಧಿಯನ್ನು ಒಪ್ಪಂದದ ದಿನಾಂಕದಿಂದ 24 ತಿಂಗಳುಗಳಿಗೆ ನಿಗದಿಪಡಿಸುವುದು.

ix. ಅಕಾಡೆಮಿಯ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ಮೂರನೇ ಪಕ್ಷಕಾರರಾದ ಕೆ.ಪಿ.ಡಬ್ಲ್ಯೂ.ಡಿ. ಅಥವಾ ಅವರಿಂದ ಅನುಮೋದಿತ ಸಂಸ್ಥೆಯವರಿಂದ ಪರಿಶೀಲನಾ ಧೃಢೀಕರಣ ಮಾಡಿಸುವುದು.

x. ಕಟ್ಟಡ ನಿರ್ಮಾಣ ಕಾಮಗಾರಿಯ ಅಂದಾಜು ವೆಚ್ಚ ರೂ.258.82ಕೋಟಿಗಳಲ್ಲಿ ಶೇ.10ರಷ್ಟು ಮೊತ್ತ ಅಂದರೆ ಅಂದಾಜು ವೆಚ್ಚ ರೂ.25.88ಕೋಟಿಯನ್ನು ಪ್ರಥಮ ಹಂತದ ಕಾರ್ಯಗಳಾದ Survey, Soil testing, Concept Drawing ಮುಂತಾದ ಖರ್ಚುಗಳನ್ನು ಭರಿಸಲು ಮೆ॥ ಹೆಚ್.ಎಸ್.ಸಿ.ಎಲ್. ಸಂಸ್ಥೆಗೆ ಹಣ ಬಿಡುಗಡೆ ಮಾಡುವುದು.

xi. ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ Escrow ಖಾತೆಯನ್ನು ತೆರೆದು ಕಾಮಗಾರಿ ವೆಚ್ಚಕ್ಕೆ ಒಪ್ಪಿಗೆ ನೀಡಿದ ಹಣವನ್ನು (ರೂ.232.94ಕೋಟಿ) ಠೇವಣಿಯಲ್ಲಿರಿಸಿ ಪ್ರಸ್ತಾವನೆ ಭಾಗದ ಕಂಡಿಕೆ 9 ರ ಉಪ ಕಂಡಿಕೆ 6(ii) (ಅ) ಯಿಂದ (ಇ) ರಲ್ಲಿ ವಿವರಿಸಿದಂತೆ ಹಣ ಬಿಡುಗಡೆ ಮಾಡುವುದು.

xii. ಭಾರತ ರತ್ನ ಸರ್. ಎಂ. ವಿಶ್ವೇಶ್ವರಯ್ಯ ರಾಷ್ಟ್ರೀಯ ನಿರ್ಮಾಣ ಅಕಾಡೆಮಿಯ ಸ್ಥಾಪನೆಗೆ ಸಂಬಂಧಿಸಿದಂತೆ ಸಂಪೂರ್ಣ ಯೋಜನೆಯ ಸಮನ್ವಯಕ್ಕಾಗಿ ಕಾರ್ಮಿಕರ ಮತ್ತು ಸಾಮಾಜಿಕ ವಲಯದಲ್ಲಿ ಅನುಭವ ಹೊಂದಿರುವ ಸರ್ಕಾರದ ಕಾರ್ಯದರ್ಶಿಯವರ ಮಟ್ಟದ ನಿವೃತ್ತ ಐ.ಎ.ಎಸ್. ಅಧಿಕಾರಿಯವರ ಸೇವೆಯನ್ನು ಪಡೆಯುವುದು.

xiii. ಅಕಾಡೆಮಿಯ ಡೈರೆಕ್ಟರ್ ಜನರಲ್ ನೇಮಕಾತಿಯನ್ನು ನೇಮಕಾತಿ ಸಮಿತಿ ಮುಖೇನ ನಡೆಸುವುದು, ನೇಮಕಾತಿ ಸಮಿತಿಯು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಕಾರ್ಮಿಕ ಆಯುಕ್ತರು **ಇವರುಗಳನ್ನು ಒಳಗೊಂಡಿರುತ್ತದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ– I | ಬೆಂಗಳೂರು, ಬುಧವಾರ, ಮೇ ೪, ೨೦೧೬ (ವೈಶಾಖ ೧೪, ಶಕ ವರ್ಷ ೧೯೩೮) | ನಂ. ೭೦೯ |
|---|---|---|
| *Part–I* | *Bengaluru, Wednesday, May 4, 2016 (Vaishaka 14, Shaka Varsha 1938)* | *No. 709* |



**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ಪಡಿತರ ಖಾತರಿ ಯೋಜನೆಯನ್ವಯ ನ್ಯಾಯ ಬೆಲೆ ಅಂಗಡಿಗಳ ಕೆಲಸದ ಅವಧಿಯನ್ನು ಪರಿಷ್ಕರಿಸುವ ಬಗ್ಗೆ.

ಓದಲಾಗಿದೆ: ದಿನಾಂಕ 18.12.2013 ಸಂಖ್ಯೆ ಆನಾಸ 368 ಡಿಆರ್‌ಎ 2013ರ ಸರ್ಕಾರಿ ಆದೇಶ.

**ಪ್ರಸ್ತಾವನೆ:**

ಪಡಿತರ ಖಾತರಿ ಯೋಜನೆಯ ಮೂಲ ಉದ್ದೇಶವು ಪ್ರತಿ ಮಾಹೆಯ 1ನೇ ತಾರೀಖಿನಂದು ಎಲ್ಲಾ ನ್ಯಾಯ ಬೆಲೆ ಅಂಗಡಿಗಳಲ್ಲಿ ಆಹಾರಧಾನ್ಯಗಳು ಕಡ್ಡಾಯವಾಗಿ ದೊರೆಯುವಂತಾಗಬೇಕು. ಇದರ ಜೊತೆಗೆ, ಪ್ರತಿ ತಿಂಗಳ ಮೊದಲ ಹತ್ತು ದಿನಗಳು ಆಹಾರಧಾನ್ಯಗಳ ವಿತರಣೆಗೆ ಹೆಚ್ಚುವರಿ ಅವಧಿಯನ್ನು ನಿಗಧಿಪಡಿಸಲಾಗಿದೆ. ಹಾಗೂ ಪ್ರತಿ ಮಾಹೆಯ ಉಳಿದ ದಿನಗಳಿಗೂ ಸಹ ನಿಯಮಿತ ಸಮಯವನ್ನು ವಿತರಣೆಗೆ ಮುಂದುವರೆಸಬೇಕಾಗಿತ್ತು ಅಂದರೆ, ಪ್ರತಿ ಮಾಹೆಯ ಎಲ್ಲಾ ದಿನಗಳು ಸಹ ನ್ಯಾಯಬೆಲೆ ಅಂಗಡಿಗಳು ತೆರೆದಿರಬೇಕು. ವಿತರಣೆಯನ್ನು ಪ್ರತಿ ಮಾಹೆಯ ಹತ್ತು ದಿನಗಳಿಗೆ ಮಾತ್ರ ಸೀಮಿತಗೊಳಿಸುವ ಯಾವುದೇ ಉದ್ದೇಶ ಹೊಂದಿರುವುದಿಲ್ಲ. ಆದರೆ, ಇದು ಉದ್ದೇಶಪೂರಕವಲ್ಲದಿದ್ದರೂ ನಡೆಯುತ್ತಿದೆ. ಇದರ ಪರಿಣಾಮದಿಂದಾಗಿ, ನ್ಯಾಯಬೆಲೆ ಅಂಗಡಿಗಳು ಮಾಹೆಯ ಕೆಲವೆ ದಿನಗಳು ಮಾತ್ರ ತೆರೆಯುತ್ತಿರುವುದಾಗಿ ವಿವಿಧ ಸ್ಥಳಗಳಿಂದ ಅನೇಕ ದೂರಗಳು ಬರುತ್ತಿವೆ. ಇದರಿಂದ ಪ್ರತಿ ಮಾಹೆಯ ಮೊದಲ ದಿನದಿಂದಲೇ ಆಹಾರಧಾನ್ಯಗಳನ್ನು ವಿತರಣೆ ಮಾಡದಿದ್ದಲ್ಲಿ ಮುಖ್ಯವಾಗಿ ಪಡಿತರ ಚೀಟಿದಾರರಿಗೆ ತುಂಬಾ ತೊಂದರೆಯಾಗುವುದು ಹಾಗೂ ಇದರಿಂದ ವಿಳಂಭವಾಗುತ್ತಿದೆ. ಈ ಸನ್ನಿವೇಶದಲ್ಲೂ ಸಹ ಪ್ರತಿ ಮಾಹೆಯ 10ನೇ ದಿನದಂದೇ ನ್ಯಾಯಬೆಲೆ ಅಂಗಡಿಗಳು ಮುಚ್ಚಲ್ಪಡುತ್ತಿವೆ.

ಆದ್ದರಿಂದ, ಪ್ರತಿ ಮಾಹೆಯ ಎಲ್ಲಾ ದಿನಗಳು ನ್ಯಾಯಬೆಲೆ ಅಂಗಡಿಗಳು ತೆರೆಯುವ ಬಗ್ಗೆ ಒಂದು ಸ್ಪಷ್ಟೀಕರಣವನ್ನು ಹೊರಡಿಸುವ ಅವಶ್ಯಕತೆ ಇರುತ್ತದೆ. ಪ್ರಸ್ತುತ ಪ್ರತಿ ಮಾಹೆಯ ಎಲ್ಲಾ ದಿನಗಳಲ್ಲೂ ನ್ಯಾಯಬೆಲೆ ಅಂಗಡಿಗಳನ್ನು ತೆರೆಯುವ ಸಂಬಂಧ ಸ್ಪಷ್ಟೀಕರಿಸಲು ಉದ್ದೇಶಿಸಿರುವುದರಿಂದ ಮೊದಲ ಹತ್ತು ದಿನಗಳ ಅವಧಿಯಂತೆಯೇ ಮಾಹೆಯ ಉಳಿದ ದಿನಗಳಿಗೂ ಸಹ ನ್ಯಾಯಬೆಲೆ ಅಂಗಡಿಗಳನ್ನು ತೆರೆಯುವುದು ಸೂಕ್ತವಾಗಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 284 ಡಿಆರ್‌ಎ 2014, ಬೆಂಗಳೂರು, ದಿನಾಂಕ: 26.04.2016**

ಪಡಿತರ ಚೀಟಿದಾರರಿಗೆ ಪಡಿತರ ವಸ್ತುಗಳನ್ನು ಸಕಾಲದಲ್ಲಿ ಪೂರೈಸುವ ಸಲುವಾಗಿ ಸರ್ಕಾರವು ಪಡಿತರ ಖಾತ್ರಿ ಯೋಜನೆಯನ್ನು ಜಾರಿಗೊಳಿಸಿದ್ದು ದಿನಾಂಕ 01.05.2016ರಿಂದ ಈ ಕೆಳಗಿನಂತೆ ಅನುಷ್ಠಾನಗೊಳಿಸಲು ಆದೇಶಿಸಿದೆ.

1. ಎಲ್ಲಾ ನ್ಯಾಯಬೆಲೆ ಅಂಗಡಿಗಳು ಪಡಿತರ ಆಹಾರ ವಸ್ತುಗಳನ್ನು ಪ್ರತಿ ಮಾಹೆಯ ಮೊದಲ ದಿನದಿಂದಲೇ ವಿತರಿಸತಕ್ಕದ್ದು;
2. ನ್ಯಾಯಬೆಲೆ ಅಂಗಡಿಗಳು ಪ್ರತಿ ಮಾಹೆಯ ಎಲ್ಲಾ ದಿನಗಳು ಈ ಹಿಂದಿನಂತೆ ನಿಗಧಿತ ಅವಧಿಯಾದ ಬೆಳಿಗ್ಗೆ 8 ರಿಂದ ಮಧ್ಯಾಹ್ನ 12ರವರೆಗೆ ಮತ್ತು ಸಂಜೆ 4 ರಿಂದ 8 ಘಂಟೆಯವರೆಗೆ ತಪ್ಪದೇ ತೆರೆಯತಕ್ಕದ್ದು; (ಪ್ರತಿ ಮಂಗಳವಾರ ಮತ್ತು ರಾಜ್ಯ ಸರ್ಕಾರದ ಇತರೇ ರಜಾ ದಿನಗಳನ್ನು ಹೊರತುಪಡಿಸಿ)

ಪಡಿತರ ಖಾತ್ರಿ ಯೋಜನೆಯ ಬಗ್ಗೆ ಪಡಿತರ ಚೀಟಿದಾರರಿಗೆ ವ್ಯಾಪಕ ಪ್ರಚಾರ ನೀಡುವುದು ಮತ್ತು ಈ ಯೋಜನೆಯ ಅರ್ಥಪೂರ್ಣ ಅನುಷ್ಠಾನಕ್ಕಾಗಿ ಸಗಟು ನಾಮಿನಿದಾರರಿಗೆ ಮತ್ತು ನ್ಯಾಯಬೆಲೆ ಅಂಗಡಿ ಪ್ರಾಧಿಕರಣದಾರರಿಗೆ ಸೂಕ್ತ ಮಾಹಿತಿ ಮತ್ತು ಸೂಚನೆಗಳನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಮೂರ್ತಿ**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– I | ಬೆಂಗಳೂರು, ಶನಿವಾರ, ಮೇ ೭, ೨೦೧೬ (ವೈಶಾಖ ೧೭, ಶಕ ವರ್ಷ ೧೯೩೮) | ನಂ. ೭೨೦ |
|---|---|---|
| *Part–I* | *Bengaluru, Saturday, May 7, 2016 (Vaishaka 17, Shaka Varsha 1938)* | *No. 720* |

**ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಕೇಂದ್ರದ ಅವಶ್ಯಕ ವಸ್ತುಗಳ ಕಾಳಸಂತೆ ಮಾರುಕಟ್ಟೆ ನಿಯಂತ್ರಣ ಮತ್ತು ಸರಬರಾಜು ನಿರ್ವಹಣೆ ಆದೇಶ 1980ರ ನಿಬಂಧನೆಗಳನ್ನು ಜಾರಿಗೊಳಿಸುವ ಬಗ್ಗೆ.

**ಸಂಖ್ಯೆ: ಆನಾಸ 27 ಆರ್‌ಪಿಆರ್ 2015, ಬೆಂಗಳೂರು, ದಿನಾಂಕ: 07 ಮೇ 2016.**

ಕೇಂದ್ರದ ಅವಶ್ಯಕ ವಸ್ತುಗಳ ಕಾಳಸಂತೆ ಮಾರುಕಟ್ಟೆ ನಿಯಂತ್ರಣ ಮತ್ತು ಸರಬರಾಜು ನಿರ್ವಹಣೆ ಆದೇಶ 1980ರ ನಿಬಂಧನೆಗಳನ್ನು ಜಾರಿಗೊಳಿಸುವ ಉದ್ದೇಶದಿಂದ

(ಅ) ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು, ಗ್ರಾಹಕ ವ್ಯವಹಾರಗಳು ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ ಇವರನ್ನು ಈ ಕಾಯಿದೆಯ ಪರಿಚ್ಛೇದ 3(1)ರಡಿ ಅಧಿಕಾರಯುತ ಅಧಿಕಾರಿಯಾಗಿ ನೇಮಿಸಲಾಗಿದೆ.

(ಆ) ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯನ್ನು ಸದರಿ ಕಾಯಿದೆಯ ಪರಿಚ್ಛೇದ 3(3)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಅವಕಾಶ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಮೂರ್ತಿ**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**


| ಭಾಗ– I | ಬೆಂಗಳೂರು, ಶನಿವಾರ, ಮೇ ೭, ೨೦೧೬ (ವೈಶಾಖ ೧೭, ಶಕ ವರ್ಷ ೧೯೩೮) | ನಂ. ೭೨೧ |
|---|---|---|
| *Part–I* | *Bengaluru, Saturday, May 7, 2016 (Vaishaka 17, Shaka Varsha 1938)* | *No. 721* |


**ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ವಿತರಿಸುವ ಸಕ್ಕರೆಯ ಚಿಲ್ಲರೆ ವಿತರಣೆ ದರವನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ:** ಕೇಂದ್ರ ಸರ್ಕಾರದ ಗ್ರಾಹಕರ ವ್ಯವಹಾರ, ಆಹಾರ ಮತ್ತು ಸಾರ್ವಜನಿಕ ವಿತರಣಾ ಮಂತ್ರಾಲಯದ ಪತ್ರ ಸಂಖ್ಯೆ 2(1)/2014–ಎಸ್‌ಪಿ–1, ದಿನಾಂಕ 26.02.2015ರ

**ಸರ್ಕಾರದ ಆದೇಶ ಸಂಖ್ಯೆ: ಆನಾಸ 60 ಡಿಆರ್‌ಎ 2015, ಬೆಂಗಳೂರು, ದಿನಾಂಕ: 07.05.2016**

ಸರ್ಕಾರವು ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ವಿತರಿಸುವ ಸಕ್ಕರೆಯ ದರವನ್ನು 1ನೇ ಜೂನ್ 2016ರಿಂದ ಜಾರಿಗೆ ಬರುವಂತೆ ಪ್ರತಿ ಕೆಜಿಗೆ ರೂ.13.50/– ರಿಂದ ರೂ.15/–ಕ್ಕೆ ಹೆಚ್ಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಮೂರ್ತಿ**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ– I | ಬೆಂಗಳೂರು, ಮಂಗಳವಾರ, ಮೇ ೧೭, ೨೦೧೬ (ವೈಶಾಖ ೨೭, ಶಕ ವರ್ಷ ೧೯೩೮) | ನಂ. ೭೪೪ |
|---|---|---|
| *Part–I* | *Bengaluru, Tuesday, May 17, 2016 (Vaishakha 27, Shaka Varsha 1938)* | *No. 744* |



**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ :** 2015–16ನೇ ಮುಂಗಾರು ಋತುವಿನ ಅವಧಿಗೆ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಆಹಾರ ಧಾನ್ಯಗಳನ್ನು ಖರೀದಿಸುವ ಪ್ರಕ್ರಿಯೆಗೆ ಮೂರು ಖರೀದಿ ಏಜೆನ್ಸಿಗಳಿಗೆ ಬ್ಯಾಂಕ್‌ನಿಂದ ರೂ. 100/– ಕೋಟಿಗಳ ಸಾಲ ಪಡೆಯಲು ಸರ್ಕಾರದ ಖಾತರಿ ನೀಡುವ ಬಗ್ಗೆ – ಆದೇಶ.

**ಓದಲಾಗಿದೆ :**
(1) ಸರ್ಕಾರದ ಆದೇಶ ಸಂ. ಆನಾಸ 41 ಆರ್‌ಪಿಆರ್ 2015, ದಿನಾಂಕ 19.12.2015
(2) ಅ.ಟಿ.ಸಂ. ಆನಾಸ 41 ಆರ್‌ಪಿಆರ್ 2015, ದಿ. 21.12.2015; 30.12.2015; 07.01.2016; 11.01.2016 ಹಾಗೂ 19.1.2016
(3) ಆನಾಸ ಮತ್ತು ಗ್ರಾಹ್ಯ ಇಲಾಖೆಯ ಆಯುಕ್ತರ ಪ.ಸಂ. ಎಫ್‌ಸಿಎಸ್/ಸಿಎಸ್/ಎಂಎಸ್‌ಸಿ/28/2015–16, ದಿ. 01.01.2016
(4) ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. FD 17 Exp-5/2016, ದಿ. 08.01.2016
(5) ಇದೇ ಕ್ರಮಾಂಕದ ಸರ್ಕಾರದ ಪತ್ರ ದಿ. 20.01.2016
(6) ಇದೇ ಕ್ರಮಾಂಕದ ಸರ್ಕಾರದ ಪತ್ರ ದಿ. 25.01.2016

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ ಆನಾಸ 41 ಆರ್‌ಪಿಆರ್ 2015, ದಿನಾಂಕ 19.12.2015ರಲ್ಲಿ 2015–16ನೇ ಮುಂಗಾರು ಋತುವಿನಲ್ಲಿ ರಾಜ್ಯಾದಾದ್ಯಂತ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಆಹಾರ ಧಾನ್ಯಗಳಿಗೆ ಕೇಂದ್ರ ಸರ್ಕಾರವು ನಿಗಧಿ ಮಾಡಿರುವ ಬೆಲೆ ಹಾಗೂ ರಾಜ್ಯ ಸರ್ಕಾರವು ನಿಗಧಿ ಮಾಡಿರುವ ಪ್ರೋತ್ಸಾಹ ಧನವನ್ನು ಸೇರ್ಪಡೆಗೊಳಿಸಿ ಒಟ್ಟಾರೆ ಖರೀದಿ ದರವನ್ನು ಈ ಕೆಳಕಂಡಂತೆ ನಿಗಧಿ ಪಡಿಸಲಾಗಿರುತ್ತದೆ:–

| ಆಹಾರ ಧಾನ್ಯದ ಹೆಸರು | ಕೇಂದ್ರ ಸರ್ಕಾರದ ನಿಗಧಿತ ದರ (ಪ್ರತಿ ಕ್ವಿಂಟಾಲ್‌ಗೆ ರೂ.ಗಳಲ್ಲಿ) | ರಾಜ್ಯ ಸರ್ಕಾರದ ಪ್ರೋತ್ಸಾಹ ಧನ (ಪ್ರತಿ ಕ್ವಿಂಟಾಲ್‌ಗೆ ರೂ.ಗಳಲ್ಲಿ) | ಒಟ್ಟು ದರ (ಪ್ರತಿ ಕ್ವಿಂಟಾಲ್‌ಗೆ ರೂ.ಗಳಲ್ಲಿ) |
|---|---:|---:|---:|
| ಭತ್ತ (ಸಾಮಾನ್ಯ) | 1,410/– | 100/– | 1,510/– |
| ರಾಗಿ | 1,650/– | 450/– | 2,100/– |
| ಬಿಳಿ ಜೋಳ– ಮಾಲ್ದಂಡಿ | 1,590/– | 510/– | 2,100/– |

ಈ ಸಾಲಿನ (2015–16) ಆಹಾರಧಾನ್ಯಗಳ ಖರೀದಿ ಪ್ರಕ್ರಿಯೆಗೆ 2014–15ನೇ ಸಾಲಿನ ಖರೀದಿ ವೆಚ್ಚಕ್ಕಿಂತ ಶೇಕಡ 15 ರಷ್ಟು ಹೆಚ್ಚಳದೊಂದಿಗೆ ರೂ. 642/– ಕೋಟಿಗಳ ವೆಚ್ಚವನ್ನು ಅಂದಾಜಿಸಲಾಗಿರುತ್ತದೆ. ಸದರಿ ಮೊತ್ತವನ್ನು ಆವರ್ತ ನಿಧಿಯಿಂದ ಬಿಡುಗಡೆ ಮಾಡಲು ದಿನಾಂಕ 26.11.2015ರಂದು ನಡೆದಿದ್ದ ಸಚಿವ ಸಂಪುಟ ಸಭೆಯಲ್ಲಿ ಅನುಮೋದನೆಯಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಆಯಾಯ ಸಂದರ್ಭಕ್ಕೆ ಅನುಗುಣವಾಗಿ 2015–16ನೇ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಆಹಾರಧಾನ್ಯಗಳ ಖರೀದಿ ಪ್ರಕ್ರಿಯೆಗೆ ಅವಶ್ಯವಿರುವ ಮೊತ್ತವನ್ನು ಆವರ್ತ ನಿಧಿಯಿಂದ ಬಿಡುಗಡೆ ಮಾಡುವಂತೆ ಸಹಕಾರ ಇಲಾಖೆಯನ್ನು ಕೋರಲಾಗಿರುತ್ತದೆ. ಅಲ್ಲದೆ ಆರ್ಥಿಕ ಇಲಾಖೆಯು ದಿನಾಂಕ 07.01.2016ರ ಅನಧಿಕೃತ ಟಿಪ್ಪಣಿಯಲ್ಲಿ ರೂ. 25/– ಕೋಟಿಗಳನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ 3475–00–107–0–20–059 ರಡಿ ಈ ಸಾಲಿನ ಪ್ರೋತ್ಸಾಹ ಧನಕ್ಕೆ ಪ್ರತ್ಯೇಕವಾಗಿ ಮೂರು ಸಂಗ್ರಹಣಾ ಏಜೆನ್ಸಿಗಳಾದ ಕರ್ನಾಟಕ ಆಹಾರ ನಾಗರಿಕ ಸರಬರಾಜು ನಿಗಮ, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಕ್ಕೆ ಸಹಕಾರ ಇಲಾಖೆಯ ಮೂಲಕ ಬಿಡುಗಡೆ ಮಾಡಲು ಸಹಮತಿಸಿರುತ್ತದೆ. ಆದರೆ ಈ ಯಾವುದೇ ಮೊಬಲಗನ್ನು ಸಹಕಾರ ಇಲಾಖೆಯು ಬಿಡುಗಡೆ ಮಾಡಿರುವುದಿಲ್ಲ.

ಮೇಲೆ (3)ರಲ್ಲಿ ಓದಲಾದ ದಿನಾಂಕ 01.01.2016ರ ಪತ್ರದಲ್ಲಿ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು 2015–16ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಆಹಾರ ಧಾನ್ಯಗಳ ಖರೀದಿಗೆ ಅಗತ್ಯವಿರುವ ಅನುದಾನವನ್ನು ಆವರ್ತ ನಿಧಿಯಿಂದ ಪಡೆಯುವಲ್ಲಿ ವಿಳಂಬವಾಗುತ್ತಿರುವ ಕಾರಣ ರಾಜ್ಯದ ರೈತರ ಹಿತದೃಷ್ಟಿಯಿಂದ ಸಂಗ್ರಹಣಾ ಏಜೆನ್ಸಿಗಳು ಖರೀದಿ ಪ್ರಕ್ರಿಯೆಗೆ ಅಗತ್ಯವಿರುವ ಮೊಬಲಗನ್ನು ಬ್ಯಾಂಕ್ ಮೂಲಕ ಸಾಲದ ರೂಪದಲ್ಲಿ ಪಡೆಯಲು ಸರ್ಕಾರದ ಖಾತರಿಯನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸಂಗ್ರಹಣಾ ಏಜೆನ್ಸಿಗಳು ಬ್ಯಾಂಕಿನಿಂದ ಸಾಲ ಪಡೆಯಲು ಸರ್ಕಾರದ ಖಾತರಿ ನೀಡುವ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಯು ಈ ಕೆಳಗಿನಂತೆ ತಿಳಿಸಿರುತ್ತದೆ.

> "Proposal has been examined. Finance Department may agrees to provide Govt., guarantee for Rs.100.00 crores now. Finance Department reiterate its view that borrowing should be resorted to only if there is a shortfall in the revolving fund, i.e., the existing funds in the revolving fund should first be used and after exhausting the same should borrowings be undertaken. The Administrative Department also advised to take cabinet approval for the Government Guarantee"

ಈ ಹಿನ್ನೆಲೆಯಲ್ಲಿ ಆವರ್ತನಿಧಿಯಿಂದ ಹಣ ಬಿಡುಗಡೆಯಾಗದಿರುವುದರಿಂದ, ಬ್ಯಾಂಕ್ ಮೂಲಕ ಸಾಲ ಪಡೆಯಲು ಆರ್ಥಿಕ ಇಲಾಖೆಯು ಆವರ್ತನಿಧಿಯಿಂದ ಪೂರ್ಣ ಹಣ ವೆಚ್ಚವಾದ ತರುವಾಯ ಬ್ಯಾಂಕ್ ಸಾಲ ಪಡೆಯುವಂತೆ ವಿಧಿಸಿದ್ದ ಷರತ್ತನ್ನು ಸಡಿಲಿಸಲು ಈ ಇಲಾಖೆಯು ಪ್ರಸ್ತಾವವನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಸಲ್ಲಿಸಿದ್ದು, ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ. PSCM/F-151/2016; dt. 11.01.2016 ರಲ್ಲಿ ಅನುಮೋದಿಸಿರುತ್ತಾರೆ. ಇದರನ್ವಯ ಮೇಲೆ ಓದಲಾದ (5) ರಲ್ಲಿನ ಇದೇ ಕ್ರಮಾಂಕದ ಸರ್ಕಾರದ ಪತ್ರದಲ್ಲಿ 2015–16ನೇ ಸಾಲಿನ ಎಂ.ಎಸ್.ಪಿ ಯೋಜನೆಯಡಿಯಲ್ಲಿ ರೈತರಿಂದ ಭತ್ತ ಹಾಗೂ ಒರಟು ಧಾನ್ಯಗಳ ಖರೀದಿಗೆ ಬ್ಯಾಂಕ್‌ನಿಂದ ಸಾಲ ಪಡೆಯಲು ಒಟ್ಟು ರೂ. 100/– ಕೋಟಿಗಳಿಗೆ ಮಾತ್ರ ಷರತ್ತುಬದ್ಧ ಸರ್ಕಾರದ ಖಾತರಿಯನ್ನು ಆಯುಕ್ತರಿಗೆ ಸಂವಹನ ಮಾಡಲಾಗಿರುತ್ತದೆ.

ಮೇಲೆ (6)ರಲ್ಲಿ ಓದಲಾದ ಇದೇ ಕ್ರಮಾಂಕದ ಸರ್ಕಾರದ ಪತ್ರದಲ್ಲಿ, ದಿನಾಂಕ 23.01.2016ರ ಸರ್ಕಾರದ ಆದೇಶ ಸಂಖ್ಯೆ. ಸಇ 446 ಎಂಆರ್‌ಇ 2014ರಲ್ಲಿ ವಿವಿಧ ಖರೀದಿ ಏಜೆನ್ಸಿಗಳಿಗೆ ಆವರ್ತ ನಿಧಿಯಿಂದ ರೂ. 57/– ಕೋಟಿಗಳನ್ನು ಸಹಕಾರ ಇಲಾಖೆಯು ಬಿಡುಗಡೆ ಮಾಡಿದ್ದನ್ನು ಹಾಗೂ ಸದರಿ ಹಣ ವಿನಿಯೋಗವಾದ ನಂತರ ಅಗತ್ಯವಿದ್ದಲ್ಲಿ ಹೆಚ್ಚುವರಿ ಅನುದಾನಕ್ಕೆ ಕೋರಿಕೆ ಸಲ್ಲಿಸಲು ಸೂಚಿಸಿದ್ದನ್ನು ಪರಿಗಣಿಸಿ, ಮೇಲೆ (5)ರಲ್ಲಿ ಓದಲಾದ ಇದೇ ಕ್ರಮಾಂಕದ ಸರ್ಕಾರದ ಪತ್ರದ ಮೇಲೆ ಮುಂದಿನ ನಿರ್ದೇಶನ ನೀಡುವವರೆಗೆ ಯಾವುದೇ ಕ್ರಮ ಜರುಗಿಸಿದಂತೆ ಆನಾಸ ಇಲಾಖೆಯ ಆಯುಕ್ತರಿಗೆ ಸ್ಪಷ್ಟ ಸೂಚನೆಯನ್ನು ನೀಡಲಾಗಿರುತ್ತದೆ.

ದಿನಾಂಕ 06.02.2016ರ ಅನಧಿಕೃತ ಟಿಪ್ಪಣಿಯಲ್ಲಿ ರೂ.12.50/– ಕೋಟಿಗಳನ್ನು ದಿನಾಂಕ 16.01.2016ರ ಸಂಖ್ಯೆ. ಸಇ 274 ಎಂಆರ್‌ಇ 2015ರ ಸರ್ಕಾರಿ ಆದೇಶದಲ್ಲಿ ಸಹಕಾರ ಇಲಾಖೆಯು ಆಹಾರ ಇಲಾಖೆಗೆ 2015–16ನೇ ಸಾಲಿನ ಎಂಎಸ್‌ಪಿ ಯೋಜನೆಗಾಗಿ ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಿರುತ್ತದೆ. ಅಲ್ಲದೇ ಆರ್ಥಿಕ ಇಲಾಖೆಯು ದಿನಾಂಕ

05.02.2016ರ ಆದೇಶದಲ್ಲಿ ಸಚಿವ ಸಂಪುಟದ ಅನುಮೋದನೆಯಂತೆ 2015-16ನೇ ಸಾಲಿನ ರೂ.100/- ಭತ್ತದ ಪ್ರೋತ್ಸಾಹ ಧನಕ್ಕಾಗಿ ರೂ.14.23/- ಕೋಟಿಗಳನ್ನು ಸಹಕಾರ ಇಲಾಖೆಗೆ ಬಿಡುಗಡೆ ಮಾಡಿರುತ್ತದೆ. ಸದರಿ ಮೊತ್ತವನ್ನು ಸಹಕಾರ ಇಲಾಖೆಯ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರಿಗೆ ಬಿಡುಗಡೆ ಮಾಡಿರುತ್ತದೆ. ಮೇಲೆ ತಿಳಿಸಿದ ರೂ.12.50/- ಕೋಟಿಗಳು ಹಾಗೂ ರೂ.14.23/- ಕೋಟಿಗಳು ಕೃಷಿ ಮಾರಾಟ ಇಲಾಖೆಗೆ ಬಿಡುಗಡೆಯಾಗಿರುತ್ತದೆ ವಿನಹ ಮೂರು ಖರೀದಿ ಏಜೆನ್ಸಿಗಳಿಗೆ ಬಿಡುಗಡೆಯಾಗಿರುವುದಿಲ್ಲ.

ಮೇಲೆ ವಿವರಿಸಲಾದ ವಸ್ತು ಸ್ಥಿತಿಯ ಆಧಾರದಲ್ಲಿ 2015-16ನೇ ಸಾಲಿನ ಎಂ.ಎಸ್.ಪಿ ಯೋಜನೆಗೆ ಹಣದ ಕೊರತೆ ಉದ್ಭವಿಸಬಾರದೆಂಬ ಕಾರಣದಿಂದ ಹಾಗೂ ಹೆಚ್ಚುವರಿ ಮೊಬಲಗಿನ ಅವಶ್ಯಕತೆ ಇರುತ್ತದೆ ಎಂಬ ಆಯುಕ್ತರ ದಿನಾಂಕ 30.01.2016ರ ಪತ್ರ ಸಂಖ್ಯೆ/ಸಿಎಫ್ಎಸ್/ಸಿಎಸ್/ಎಂಎಸ್‌ಪಿ/28/2015-16ರಲ್ಲಿ ತಿಳಿಸಿದ್ದ ಅಭಿಪ್ರಾಯವನ್ನು ಪರಿಗಣಿಸಿ ಮೂರು ಸಂಗ್ರಹಣಾ ಏಜೆನ್ಸಿಗಳು ಬ್ಯಾಂಕ್‌ನಿಂದ ರೂ. 100/- ಕೋಟಿಗಳ ಸಾಲ ಪಡೆಯಲು ಸರ್ಕಾರದ ಖಾತರಿಯನ್ನು ನೀಡುವ ಬಗ್ಗೆ ಆರ್ಥಿಕ ಇಲಾಖೆಯು ವಿಧಿಸಿದ್ದ ಷರತ್ತನ್ನು ಸಡಿಲಿಸಲು ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿದ್ದನ್ನು ದಿನಾಂಕ 22.02.2016ರಂದು ನಡೆದ ಸಚಿವ ಸಂಪುಟ ಸಭೆಯ ಮುಂದೆ ಮಂಡಿಸಿದ್ದು, ಸಚಿವ ಸಂಪುಟವು ಪ್ರಕರಣ ಸಂಖ್ಯೆ ಸಿ/93/2016ರಲ್ಲಿ ಅನುಮೋದಿಸಿರುತ್ತದೆ.

ಮೇಲಿನ ಎಲ್ಲಾ ಅಂಶಗಳ ಪರಿಗಣನೆಯೊಂದಿಗೆ ಎಂ.ಎಸ್.ಪಿ. ಖರೀದಿ ಪ್ರಕ್ರಿಯೆಯ ಸುಗಮ ಅನುಷ್ಠಾನಕ್ಕೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆನಾಸ 01 ಇಭತ 2016, ಬೆಂಗಳೂರು ದಿನಾಂಕ 15.03.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರೈತರಿಂದ 2015-16ರ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಭತ್ತ ಹಾಗೂ ಒರಟು ಧಾನ್ಯಗಳ ಖರೀದಿಗೆ ಮೂರು ಖರೀದಿ ಏಜೆನ್ಸಿಗಳು ಬ್ಯಾಂಕ್‌ನಿಂದ ಸಾಲ ಪಡೆಯಲು ಒಟ್ಟು ರೂ.100.00 ಕೋಟಿ (ಒಂದು ನೂರು ಕೋಟಿಗಳು ಮಾತ್ರ)ಗಳಿಗೆ ಮಾತ್ರ ಸರ್ಕಾರದ ಖಾತರಿಯನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಪ್ರಕ್ರಿಯೆಯ ನೋಡಲ್ ಅಧಿಕಾರಿಯಾದ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರಿಗೆ ನೀಡಲಾಗಿರುತ್ತದೆ:-

ಅ) ಎಲ್ಲಾ ಮೂರು ಏಜೆನ್ಸಿಗಳಿಗೂ ಸೇರಿದಂತೆ ಒಟ್ಟಾರೆ ರೂ.100.00 ಕೋಟಿಗಳ ಬ್ಯಾಂಕ್ ಸಾಲಕ್ಕೆ ಮಾತ್ರ ಸರ್ಕಾರದ ಖಾತರಿ ಸೀಮಿತವಾಗಿರುತ್ತದೆ; ಯಾವುದೇ ಸಂದರ್ಭದಲ್ಲಿ ಸರ್ಕಾರವು ಖಾತರಿ ನೀಡಿರುವ ಈ ಸಾಲದ ಮೊತ್ತವನ್ನು ಮೀರತಕ್ಕದ್ದಲ್ಲ;

ಆ) ಆಯುಕ್ತರು, ಆಹಾರ, ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ವಸ್ತುಸ್ಥಿತಿ ಹಾಗೂ ಖರೀದಿಯ ಪರಿಮಾಣದ ಆಧಾರದನ್ವಯ ಸರ್ಕಾರವು ಖಾತರಿ ನೀಡಿರುವ ಸದರಿ ರೂ.100.00 ಕೋಟಿಗಳ ಸಾಲದ ಮೊತ್ತವನ್ನು ಸಂಬಂಧಿಸಿದ ಮೂರು ಖರೀದಿ ಏಜೆನ್ಸಿಗಳಿಗೆ ಹಂಚಿಕೆ ಮಾಡತಕ್ಕದ್ದು;

ಇ) ಈ ಮೊತ್ತವನ್ನು 2015-16ನೇ ಸಾಲಿನ ಕನಿಷ್ಟ ಬೆಂಬಲ ಬೆಲೆ ಖರೀದಿ ಪ್ರಕ್ರಿಯೆಗೆ ಮಾತ್ರ ಉಪಯೋಗಿಸತಕ್ಕದ್ದು; ಈ ಮೊತ್ತವನ್ನು ಯಾವುದೇ ಹಿಂದಿನ/ ಬಾಕಿ ಸಾಲ ಮರುಪಾವತಿಗೆ ಅಥವಾ ಇತರೆ ಯಾವುದೇ ವೆಚ್ಚಕ್ಕೆ ಬಳಸತಕ್ಕದ್ದಲ್ಲ;

ಮೂರು ಖರೀದಿ ಏಜೆನ್ಸಿಗಳು ಸರ್ಕಾರವು ಖಾತರಿ ನೀಡಿರುವ ರೂ. 100/- ಕೋಟಿಗಳ ಸಾಲ ಪಡೆಯುವಿಕೆಯ ಸಂಪೂರ್ಣ ಸ್ಥಿತಿಯ/ ಪ್ರಕ್ರಿಯೆಯ ಕಾಲಘಟ್ಟದ ಮಾಹಿತಿಯನ್ನು ನೋಡಲ್ ಅಧಿಕಾರಿಯಾದ ಆಯುಕ್ತರು ಸರ್ಕಾರಕ್ಕೆ ಕಾಲಾನುಕಾಲಕ್ಕೆ ವಿವರವಾಗಿ ವರದಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ.ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಡಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ- I | ಬೆಂಗಳೂರು, ಮಂಗಳವಾರ, ಮೇ ೧೭, ೨೦೧೬ (ವೈಶಾಖ ೨೭, ಶಕ ವರ್ಷ ೧೯೩೮) | ನಂ. ೭೪೬ |
|---|---|---|
| *Part–I* | *Bengaluru, Tuesday, May 17, 2016 (Vaishakha 27, Shaka Varsha 1938)* | *No. 746* |


**ಕರ್ನಾಟಕ ಸರ್ಕಾರ**

**ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು**

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆಗಳ ಅಪರ ಆಯುಕ್ತರು (ಜಾರಿ), ದಕ್ಷಿಣ ವಲಯ, ಬೆಂಗಳೂರು, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾಗೃತಿ), ಬೆಂಗಳೂರು ಹಾಗೂ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಮೈಸೂರು, ಮಲೆನಾಡು, ಮಂಗಳೂರು, ಹುಬ್ಬಳ್ಳಿ, ಬೆಳಗಾವಿ, ಕಲ್ಬುರ್ಗಿ ಹಾಗೂ ಬಳ್ಳಾರಿ ವಿಭಾಗ/ವಲಯಗಳ ಅಧಿಕಾರಿಗಳಿಗೆ ನೀಡಲಾಗಿರುವ ಭೌಗೋಳಿಕ ಕ್ಷೇತ್ರವ್ಯಾಪ್ತಿ ಮತ್ತು ಶಾಸನಬದ್ಧ ಕಾರ್ಯವ್ಯಾಪ್ತಿ ಆದೇಶದ ತಿದ್ದುಪಡಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ವಾತೆಅಆ(ಗು&ಸ)/ಸಅ/ಎ-2/ಜೆಡಿಎನ್/ಸಿ.ಆರ್-192/2015-16, ದಿನಾಂಕ: 02-04-2016.

2) ವಾ.ತೆ.ಜಂ.ಆ (ಜಾರಿ), ಬೆಳಗಾವಿ, ಇವರ ಪತ್ರ ಸಂಖ್ಯೆ: ಪಿಎ/ಪಿಆರ್-07/16-17/ಬಿ- /ದಿನಾಂಕ: 27-04-2016.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖದ (1)ರ ಆದೇಶದ ಪರಿಚ್ಛೇದ "7"ರಲ್ಲಿ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಉತ್ತರ ವಲಯ, ಬೆಳಗಾವಿ ವಿಭಾಗದ ಅಧಿಕಾರಿಗಳವರಿಗೆ ನೀಡಲಾಗಿರುವ ಕ್ಷೇತ್ರವ್ಯಾಪ್ತಿ ಮತ್ತು ಕಾರ್ಯವ್ಯಾಪ್ತಿ ಆದೇಶದಲ್ಲಿನ ಪುಟ 25ರ ಅಧಿಕಾರಿಗಳ ಪದನಾಮದ ಕ್ರಮಸಂಖ್ಯೆ-3 ರಲ್ಲಿ "ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಜಾರಿ)-01, ಬೆಳಗಾವಿ" ಬದಲಾಗಿ "ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಜಾರಿ), ಬೆಳಗಾವಿ" ಎಂದು ತಪ್ಪಾಗಿ ಆದೇಶಿಸಲಾಗಿದೆ ಎಂದು ಉಲ್ಲೇಖ (2)ರ ಪತ್ರದಲ್ಲಿ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಉತ್ತರ ವಲಯ, ಬೆಳಗಾವಿ, ಇವರು ತಿಳಿಸಿ ತಿದ್ದುಪಡಿ ಮಾಡುವಂತೆ ಕೋರಿರುತ್ತಾರೆ.

2) ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಉತ್ತರ ವಲಯ, ಬೆಳಗಾವಿ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಇವರ ಕೋರಿಕೆಯು ಸಮಂಜಸವಾಗಿರುವುದರಿಂದ ಹಾಗೂ ರಾಜಸ್ವದ ಹಿತದೃಷ್ಟಿಯಿಂದ "ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಜಾರಿ)-01, ಬೆಳಗಾವಿ" ಬದಲಾಗಿ "ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಜಾರಿ), ಬೆಳಗಾವಿ" ಎಂದು ತಪ್ಪಾಗಿರುವುದನ್ನು ತಿದ್ದುಪಡಿ ಮಾಡಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ವಾ.ತೆ.ಅ.ಆ/ಗು&ಸ/ಜೆಡಿಎನ್/ಇ/ಸಿಆರ್–192/15–16, ದಿನಾಂಕ: 27–04–2016.**

ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಉತ್ತರ ವಲಯ, ಬೆಳಗಾವಿ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಇವರ ಕೋರಿಕೆಯು ಸಮಂಜಸವಾಗಿರುವುದರಿಂದ ಹಾಗೂ ರಾಜಸ್ವದ ಹಿತದೃಷ್ಟಿಯಿಂದ ಉಲ್ಲೇಖ (1)ರ ಆದೇಶದ ಪರಿಚ್ಛೇದ "7–ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ), ಉತ್ತರ ವಲಯ, ಬೆಳಗಾವಿ" ಇದರ ಕ್ರಮ ಸಂಖ್ಯೆ 3ರಲ್ಲಿರುವ "ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಜಾರಿ), ಬೆಳಗಾವಿ" ಬದಲಾಗಿ "ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಜಾರಿ)–01, ಬೆಳಗಾವಿ" ಎಂದು ತಿದ್ದುಪಡಿ ಮಾಡಿ ಆದೇಶಿಸಲಾಗಿದೆ.

**ರಿತ್ವಿಕ್ ಪಾಂಡೆ**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 500 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– *I* | ಬೆಂಗಳೂರು, ಶುಕ್ರವಾರ, ಮೇ ೨೦, ೨೦೧೬ (ವೈಶಾಖ ೩೦, ಶಕ ವರ್ಷ ೧೯೩೮) | ನಂ. ೭೫೨ |
| *Part–I* | *Bengaluru, Friday, May 20, 2016 (Vaishakha 30, Shaka Varsha 1938)* | *No. 752* |


**FINANCE SECRETARIAT**

**PROCEEDINGS OF THE GOVERNMENT OF KARNATAKA**

**Subject:**- Procedure for withdrawal of NPS amount at the time of Superannuation or before superannuation and death while in service.

**READ:-** 1. G.O. No.FD (Spl)04 PET 2005, Bangalore, dated 31.03.2006.
2. G.O.No.FD (Spl)28 PEN 2009, Bangalore, dated 29.03.2010.
3. G.O.No.FD (Spl)01 PEN 2010, Bangalore, dated 20.10.2010.
4. G.O.No.FD (Spl) 203 PEN 2012, Bangalore, dated 16.01.2013.
5. G.O.No.FD(Spl) 203 PEN 2012, Bangalore dated 30.07.2014.
6. Circular No:FD(Spl)203 PEN 2012(Part) Bengaluru, dated: 21.05.2015.
7. Letter No.DOT/NPS/17/2011-12,Dt:14.1.2016 of Director of Treasuries, Bengaluru.

**PREAMBLE:**

Government of Karnataka has introduced a New Defined Contribution Pension system for its employees who joined/join Government service on or after 01-04-2006 in G.O. read at (1) above and it was operationalised from 01/04/2010 in G.O. read at (2) above. NPS is made applicable for the members of the All India Services Officers (Karnataka Cadre) joining the All India Services on or after 01/01/2004 in G.O read at (3) above.

According to para 4 & 1(F) of G.O. read at (1) & (3) above, Government employees who are under NPS shall at the time of superannuation i.e., at the time of exit from service, be mandatorily required to invest 40% of accumulated amount in the Permanent Retirement Account (PRA) towards purchase of an annuity to facilitate for payment of pension to the employee. As per para (5) of the said G.O. the NPS employees of Government who leave the scheme before attaining the age of superannuation, the mandatory annuitization rate shall be 80% of the total accumulated amount in the Permanent Retirement Account (PRA) for making payment of pension. Detailed procedure for settlement of accumulated pension corpus to the nominee/family members/legal heirs of NPS employee whose death occurred while in service is issued in the G.O read at (5) above. In the Circular read at (6) above, detailed procedure for withdrawal of entire NPS amount, on superannuation, if accumulated pension amount is equal to or less than Rs. 2,00,000 is issued.

As per the notification of PFRDA (Exit and withdrawal under NPS) Regulations 2015 which was issued on 11th May 2015, the procedures/conditions for exit from NPS in case of superannuation and other than superannuation is slightly changed. Hence, the Director of

Treasuries, in letter read at (7) above has sent a proposal to Government for detailing the procedure for withdrawal of accumulated NPS amount of Government Employees is more than Rs. 2,00,000/- at the time of superannuation and to issue a revised order as per PFRDA regulations by superseding G.Os and Circulars read at (4), (5) and (6) above.

Therefore, after examining all these aspects Government has decided to order as follows:

**GOVERNMENT ORDER NO: FD (Spl) 203 PEN 2012(P), BENGALURU, DATED: 18.05.2016**

In supersession of G.O. No.FD (Spl) 203 PEN 2012, dated:16.01.2013 and G.O. No. FD (Spl) 203 PEN 2012, dated:30.7.2014 and Circular No:FD(Spl)203 PEN 2012(Part) Bengaluru, dated 21.05.2015, Government issues this Order for withdrawal of accumulated NPS amount in Permanent Retirement Account of Government employees at the time of superannuation/resignation/death while in service, for employees who have joined/join the Government service on or after 01/04/2006 and Officers who have joined/join All India Services on or after 01/01/2004 borne on Karnataka cadre.

**A. WHERE THE SUBSCRIBER RETIRES AT THE AGE OF SUPERANNUATION:-**

40%of the accumulated pension corpus of the subscriber shall to be utilized for purchase of an annuity providing for the monthly pension of the subscriber and the balance 60% shall be paid as lump sum to the subscriber. In default annuity scheme/contract, monthly pension shall be paid for life of the subscriber and his/her spouse (if any) with provision for return of purchase price of the annuity, upon death of such subscriber/spouse, be re-issued to the family members in the order specified hereunder at a rate prevalent at the time of purchase of such annuity.

(a) Living dependent mother of the deceased subscriber,
(b) Living dependent father of the deceased subscriber.

After the coverage of all the family members specified above, the purchase price will be returned to the surviving children of the subscriber and in the absence of children, the legal heirs of the subscriber.

In case the accumulated pension wealth in the permanent Retirement Account of the subscriber who retires at the time of superannuation is equal to or less than a sum of two lakh rupees, the subscriber shall have the option to withdraw the entire accumulated pension wealth without purchasing annuity. In such cases the subscriber will not be eligible for any pension under the scheme.

**B. WHERE THE SUBSCRIBER WHO, BEFORE ATTAINING THE AGE OF SUPERANNUATION RESIGNS FROM GOVERNMENT SERVICE FOR OTHER REASONS:-**

80% of the accumulated pension wealth of the subscriber shall mandatorily be utilized for purchase of annuity and the balance of 20% shall be paid to the subscriber in lump sum. In default annuity scheme/contract, monthly pension shall be paid for life of the subscriber and his/her spouse (if any) with provision for return of purchase price of the annuity, upon death of such subscriber/spouse, be re-issued to the family members in the order specified hereunder at a rate prevalent at the time of purchase of such annuity.

(a) Living dependent mother of the deceased subscriber,
(b) Living dependent father of the deceased subscriber.

After the coverage of all the family members specified above, the purchase price will be returned to the surviving children of the subscriber and in the absence of children, the legal heirs of the subscriber.

If the accumulated pension wealth in the Permanent Retirement Account of the employee who leave the scheme before attaining the age of superannuation is equal to or less than one lakh rupees, the subscriber shall have the option to withdraw the entire accumulated pension wealth without purchasing annuity.

**C. IN CASE OF EMPLOYEE WHO, BEFORE ATTAINING THE AGE OF SUPERANNUATION DIES WHILE IN SERVICE:**

The accumulated pension wealth of the subscriber is more than two lakh rupees, 80% of the accumulated pension wealth of the subscriber shall be mandatorily utilized for purchase of annuity and balance of 20% shall be paid as lump sum to the nominee or nominees or legal heirs as the case may be, of such employee. In this case, pension shall be provided for life of the spouse of the subscriber with provision of return of purchase price of the annuity, upon the death of such spouse be re-issued to the family members in the order specified hereunder at a prevalent rate at the time of purchase of the annuity.

(a) Living dependent mother of the deceased subscriber,

(b) Living dependent father of the deceased subscriber.

After the coverage of all the family members specified above, the purchase price will be returned to the surviving children of the subscriber and in the absence of children, the legal heirs of the subscriber.

If the accumulated pension wealth in the PRA of the employee at the time of his or her death is equal or less than two lakh rupees, the nominee /legal heirs shall have the option to withdraw the entire accumulated pension wealth without requiring to purchase any annuity and upon such exercise, family members shall not be eligible for any pension under the NPS Scheme.

The procedure to be followed for withdrawal as per existing PFRDA Exit Rules in all the above cases, are detailed in the annexure to this G.O. and may stand modified from time to time as per PFRDA guidelines.

By Order and in the name of the Governor of Karnataka.

**R.VASANTHA**
Under Secretary to Government
Finance Department (Pension &FCC)

**Annexure to the G.O**

1. Retiring/retired Employee shall report missing credits (NPS amount deducted from salary but not reflected in PRA) if any in his PRA to the Treasury officer through his DDO.
2. Treasury Officer shall trace the missing credit. (i.e. NPS amount deducted from employee's salary but not credited to his PRA) and arrange to credit the same to employee's PRA together with matching Government contribution. If the missing credit happens to be with other Treasury, present Treasury officer shall refer the same to the concerned Treasury Officer and ask him to arrange to credit the missing contribution to the employee's PRA. However there shall not be any claim from the employee for compensating any loss due to the missing credit.

3. Retiring/retired employee shall submit his/her application for withdrawal from PRA after ensuring that there are no missing credits in the enclosed format to his/her DDO.
4. No recovery shall be made under NPS for last 3 months of normal superannuation. If it is recovered, same shall be settled by the concerned employer at their end by drawing through payees receipt under the HOA 8342 00 117 through concerned Treasury. Govt contribution for the said three months shall be drawn on payees receipt (CTS 8) by the concerned DDO from the Treasury by debiting HOA 2071-01-117-0-01.
5. Pension or accumulated pension wealth in the Tier-I account of the permanent retirement account of the NPS subscribers under National Pension System on account of past services or present services shall not be liable to seizure, attachment or sequestration by process of any Court at the instance of a creditor, for any demand against the subscriber, or in satisfaction of a Decree or Order of any such Court.
6. Government/Appointing Authority shall have the right of withholding the co-contributions made by the State Government as employer to the Tier-I account of the National Pension System account (PRA) of the employee and without any investment income accruing thereon, in the event of recovery of the whole or part of any pecuniary loss caused to the Government, if, in any departmental or judicial proceedings, the government servant is found guilty of grave misconduct or negligence during the period of service under the relevant service rules. However, such right of withholding shall have to be effected before the date of normal superannuation of the employee pursuant to a notice to be given to the National Pension System Trust, seeking to withhold the said co-contributions from the accumulated pension wealth of the subscriber and providing the evidence thereof on the related matter.
7. Three months prior to the exit from service upon superannuation or before the age of superannuation of the employee, he/she has to submit the duly filled in withdrawal form along with supporting documents to his/her DDOs - **Employee also has the option to initiate withdrawal request in CRA website.**
8. The required documents to be submitted to DDOs are:
   a. Original PRAN Card / notarized affidavit in case if the original is not submitted.
   b. Photo ID proof
   c. Residence proof
   d. Cancelled cheque/bank certificate/copy of the bank passbook with photograph and all the other details like IFS Code, Account no, Branch address and Code.
   e. Direct credit mandate
   f. Annuity application form duly filled and signed by subscriber
   g. Death certificate in original, if the claim is for the benefits arising out of the death of the retired subscriber. Death certificate should be in English. If the Death certificate is in the language other than English or Hindi, the Treasury officer shall translate the same into English language and should be duly attested by the Treasury officer.
   h. Legal heir certificate in English wherever applicable
   i. Relieving letter and NOC, if applicable.
9. On receipt of duly filled and attested withdrawal forms along with required documents, DDO shall verify the withdrawal forms with supporting documents and service details and details of the credits in Schedule of Transactions (SOT) of CRA and after verification

| ಕ್ರ. ಸಂ. | ಹೋಬಳಿ/ ಗ್ರಾಮ/ ಪ್ರದೇಶ/ರಸ್ತೆಯ ಹೆಸರು | ಖುಷ್ಕಿ | ತರಿ | ಭಾಗಾಯ್ತು | ಸ್ಥಳೀಯ ಸಂಸ್ಥೆ ವಸತಿ ನಿವೇಶನ ಮೌಲ್ಯ | ಭೂ ಪರಿವರ್ತಿತ ಸಕ್ಷಮ ಪ್ರಾಧಿಕಾರದಿಂದ ಅನುಮೋದಿತ ವಸತಿ ನಿವೇಶನದ ಮೌಲ್ಯ |
|---|---|---|---|---|---|---|
| | | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ |
| 1 | 2 | 3 | 4 | 5 | 6 | 7 |
| 248 | ಬೆಳ್ಳಾರ | 80000 | 123000 | 243000 | 400 | 1900 |
| 249 | ರಾಷ್ಟ್ರೀಯ ಹೆದ್ದಾರಿ 150ಎ | 159000 | 231000 | 452000 | 400 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 1,3,4,5,6,7,8,26,28,30,31,32,33,34,51, 52,132,133,142,143,144,145,146,153, 193,198,199,201,202,203, 204,227, 234, | | | | |
| 295 | ಭೈರಾಪುರ | 76000 | 112000 | 224000 | 400 | 1900 |
| 251 | ರಾಷ್ಟ್ರೀಯ ಹೆದ್ದಾರಿ 150ಎ | 155000 | 231000 | 452000 | 600 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 64,65,66 | | | | |
| 252 | ಬೋರನಕಣಿವೆ | 95000 | 205000 | 215000 | 400 | 1900 |
| 253 | ರಾಷ್ಟ್ರೀಯ ಹೆದ್ದಾರಿ 150ಎ | 190000 | 408000 | 440000 | 600 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 10,41,42,43,47,48,52,53,55,87,96,97, 98,99, | | | | |
| 254 | ಮರೇನಡು | 70000 | 103000 | 234000 | 400 | 1900 |
| 255 | ಮಾರುಹೊಳೆ | 76000 | 112000 | 224000 | 400 | 1900 |
| 256 | ರಾಷ್ಟ್ರೀಯ ಹೆದ್ದಾರಿ 150ಎ | 145000 | 232000 | 452000 | 600 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 22,23,25,28,29,30,31,34,35,62,63,85, 88, | | | | |
| 257 | ಮುತ್ತುಗದಹಳ್ಳಿ | 78000 | 131000 | 234000 | 400 | 1900 |
| 258 | ಮೇಲನಹಳ್ಳಿ | 77000 | 131000 | 234000 | 400 | 1900 |
| 259 | ಮೋಟೀಹಳ್ಳಿ | 77000 | 122000 | 234000 | 400 | 1900 |
| 260 | ಯಗಚೀಹಳ್ಳಿ | 77000 | 122000 | 234000 | 400 | 1900 |

| ಕ್ರ. ಸಂ. | ಹೋಬಳಿ/ ಗ್ರಾಮ/ ಪ್ರದೇಶ/ರಸ್ತೆಯ ಹೆಸರು | ಖುಷ್ಕಿ | ತರಿ | ಭಾಗಾಯ್ತು | ಸ್ಥಳೀಯ ಸಂಸ್ಥೆ ವಸತಿ ನಿವೇಶನ ಮೌಲ್ಯ | ಭೂ ಪರಿವರ್ತಿತ ಸಕ್ಷಮ ಪ್ರಾಧಿಕಾರದಿಂದ ಅನುಮೋದಿತ ವಸತಿ ನಿವೇಶನದ ಮೌಲ್ಯ |
|---|---|---|---|---|---|---|
| | | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ |
| 1 | 2 | 3 | 4 | 5 | 6 | 7 |
| 261 | ರಾಷ್ಟ್ರೀಯ ಹೆದ್ದಾರಿ 150ಎ | 145000 | 231000 | 452000 | 600 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 9,10,11,12,13,14,15,19,20,21,52, | | | | |
| 262 | ಯರೇಹಳ್ಳಿ | 87000 | 122000 | 234000 | 400 | 1900 |
| 263 | ಯಳನಡು | 115000 | 149000 | 234000 | 400 | 1900 |
| 264 | ರಾಷ್ಟ್ರೀಯ ಹೆದ್ದಾರಿ 150ಎ | 235000 | 297000 | 463000 | 600 | 2100 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 57,58,59,60,66,150,151,152,157, | | | | |
| 295 | ಲಕ್ಕೇನಹಳ್ಳಿ | 77000 | 112000 | 224000 | 400 | 1900 |
| 266 | ವಡ್ಡನಕಲ್ಲಹಳ್ಳಿ | 87000 | 112000 | 224000 | 400 | 1900 |
| 267 | ವಳಗೆರೆಹಳ್ಳಿ | 115000 | 149000 | 224000 | 400 | 1900 |
| 268 | ಶಿಡ್ಲಕಟ್ಟೆ | 68000 | 122000 | 234000 | 400 | 1900 |
| 269 | ಸಂಗೇನಹಳ್ಳಿ | 95000 | 141000 | 242000 | 400 | 1900 |
| 270 | ಸಿಂಗಾಪುರ | 95000 | 141000 | 242000 | 400 | 1900 |
| 271 | ಸೀಗೇಬಾಗಿ | 95000 | 141000 | 234000 | 400 | 1900 |
| 272 | ಸೋಮನಹಳ್ಳಿ | 77000 | 112000 | 205000 | 400 | 1900 |
| 273 | ಹಂದಿಗನಡು | 87000 | 131000 | 234000 | 400 | 1900 |
| 274 | ಹುಳಿಯಾರು | 335000 | 261000 | 298000 | | |
| 275 | ರಾಷ್ಟ್ರೀಯ ಹೆದ್ದಾರಿ 150ಎ | 670000 | 1012000 | 1505790 | 1800 | 2400 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 2,3,4,6,8,9,10,17,18,19,20,24,46,48,4<br>9,60,61,112,145,150,151,166,167,168<br>,170,171,193, | | | | |
| 276 | ಹುಳಿಯಾರು ಅಮಾನಿಕೆರೆ | 435000 | 460000 | 484000 | 1500 | 2200 |
| 277 | ರಾಷ್ಟ್ರೀಯ ಹೆದ್ದಾರಿ 150ಎ | 870000 | 919000 | 967000 | 1800 | 2400 |

| ಕ್ರ. ಸಂ. | ಹೋಬಳಿ/ ಗ್ರಾಮ/ ಪ್ರದೇಶ/ರಸ್ತೆಯ ಹೆಸರು | ಖುಷ್ಕಿ | ತರಿ | ಭಾಗಾಯ್ತು | ಸ್ಥಳೀಯ ಸಂಸ್ಥೆ ವಸತಿ ನಿವೇಶನ ಮೌಲ್ಯ | ಭೂ ಪರಿವರ್ತಿತ ಸಕ್ಷಮ ಪ್ರಾಧಿಕಾರದಿಂದ ಅನುಮೋದಿತ ವಸತಿ ನಿವೇಶನದ ಮೌಲ್ಯ |
|---|---|---|---|---|---|---|
| | | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಎಕರೆಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ | ಪ್ರತಿ ಚ.ಮೀಗೆ ರೂ.ಗಳಲ್ಲಿ |
| 1 | 2 | 3 | 4 | 5 | 6 | 7 |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 2,3,4,5,6,8,10,11,17,42,45,46,47,78,79,83,93,94,95,96,97,98,99,100,101,102,104, | | | | |
| 278 | ಹೊಯ್ಸಳಕಟ್ಟೆ | 100000 | 195000 | 315000 | 400 | 1900 |
| | ರಾಷ್ಟ್ರೀಯ ಹೆದ್ದಾರಿ 150ಎ | | | | | |
| | ಹೊಂದಿಕೊಂಡಿರು ಸರ್ವೆ ನಂಬರುಗಳು | 62,63,64,65,67,71,72,73,74,75,77,78,79,80,82,83,84,102,103,116, | | | | |

## ಚಿಕ್ಕನಾಯಕನಹಳ್ಳಿ ತಾಲ್ಲೂಕು ಉಪನೋಂದಣಿ ಕಛೇರಿಯ ವ್ಯಾಪ್ತಿಗೆ ಒಳಪಡುವ ಗ್ರಾಮ ಮತ್ತು ಪಟ್ಟಣಗಳ ಹೋಬಳಿವಾರು ಸ್ಥಿರಾಸ್ತಿಗಳ (ನಿವೇಶಗಳ) ಪರಿಷ್ಕೃತ ಮಾರ್ಗಸೂಚಿ ಪಟ್ಟಿ

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| | ಗ್ರಾಮ/ಪ್ರದೇಶ/ರಸ್ತೆಯ ಹೆಸರು | |
| | **ಹುಳಿಯಾರು** | |
| 279 | ಮಾರುತಿ ನಗರ | 1600 |
| 280 | ಆಜಾದ್ ನಗರ | 1700 |
| 281 | ಇಂದಿರಾ ನಗರ ಬೀರೆದೇವರ ಹಟ್ಟಿ | 1700 |
| 282 | ವಿನಾಯಕನಗರ(1. ಎ.ಕೆ.ಕಾಲೋನಿ 2. ದುರ್ಗಮ್ಮನಗುಡಿ ಎದರು ಎ.ಕೆ.ಕಾಲೋನಿ) | 1200 |
| 283 | ದುರ್ಗಮ್ಮನಗುಡಿಬೀದಿ | 1300 |
| 284 | ಅಸ್ಪತ್ರೆ ರಸ್ತೆ | 4300 |
| 285 | ವಿವಾಕಾನಂದರಸ್ತೆ | 1700 |
| 286 | ವಸಂತನಗರ | 1300 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 287 | ಶಂಕರಪುರ | 1200 |
| 288 | ಗಾಂಧೀಪೇಟೆ | 5500 |
| 289 | ಕೆನರಾಬ್ಯಾಂಕ್ ರಸ್ತೆ | 3200 |
| 290 | ಮಾಸ್ತಮ್ಮನಗುಡಿ ಬೀದಿ | 1300 |
| 291 | ಲಿಂಗಾಯತರ ಬೀದಿ | 1300 |
| 292 | ಬ್ರಾಹ್ಮಣರ ಬೀದಿ (ಹಳೆಅಂಚೆಕಚೇರಿರಸ್ತೆ) | 3600 |
| 293 | ಕೃಷಿ ಉತ್ಪನ್ನ ಮಾರುಕಟ್ಟೆ ಅವರಣ | 2400 |
| 294 | ತೊರೆಸೊರಗೊಂಡನಹಳ್ಳಿ ರಸ್ತೆ ಪೋಲೀಸ್ ಠಾಣೆ ಹಿಂಬಾಗ | 1300 |
| 295 | ಯಳನಡು ರಸ್ತೆ (ಹೆಂಚಿನ ಕಾರ್ಖಾನೆ) | 1800 |
| 296 | ಸುಣ್ಣಕಲ್ಲು ಗೂಡು ಬಡಾವಣೆ | 1800 |
| 297 | ವಿಜಯನಗರ | 1200 |
| 298 | ಹೊಸಬಡಾವಣೆ ಹಾಗೂ ಇತರೆ | 1200 |
| | **ರಾಷ್ಟ್ರೀಯ ಹೆದ್ದಾರಿಗೆ ಒಳಪಡುವ ನಿವೇಶನಗಳಿಗೆ ವಾಣಿಜ್ಯ ನಿವೇಶನದ ಬೆಲೆ ನಿಗಧಿಪಡಿಸಲಾಗಿದೆ.** | |
| | **ಹುಳಿಯಾರು ಗ್ರಾಮದ ವ್ಯಾಪ್ತಿಗೆ ಒಳಪಡುವ ಬಡಾವಣೆಗಳ ಮಾರ್ಗಸೂಚಿ ಬೆಲೆಪಟ್ಟಿ** | |
| 299 | ಪೊಟ್ರೋಲ್ ಬಂಕ್ ನಿಂದ ಬಸ್ ನಿಲ್ದಾಣದವರೆಗೆ | 8100 |
| 300 | ಆಸ್ಪತ್ರೆಬೀದಿ (ಆಚಾರರಬೀದಿ) | 7700 |
| 301 | ಕೆನರಾ ಬ್ಯಾಂಕ್ ರಸ್ತೆ ( ಪೋಲೀಸ್‌ಠಾಣೆಯಿಂದ ಬಸ್ ನಿಲ್ದಾಣದವರೆಗೆ) | 7700 |
| 302 | ಪೊಟ್ರೋಲ್ ಬಂಕ್ ವೃತ್ತದಿಂದ ರಾಮಗೋಪಾಲ್ ಸರ್ಕಾಲ್‌ವರೆಗೆ (ಶಿರಾ–ಬಾಣಾವರ ರಸ್ತೆ) | 8900 |
| 303 | ರಾಮಗೋಪಾಲ ಸರ್ಕಲ್‌ನಿಂದ ಆರ್.ಎಂ.ಸಿ.ಯಾರ್ಡ್‌ವರೆಗೆ (ಶಿರಾ–ಬಾಣಾವರ ರಸ್ತೆ) | 5400 |
| 304 | ಗಾಂಧೀಪೇಟೆ ಬಸ್ ನಿಲ್ದಾಣದಿಂದ ರಾಮಗೋಪಾಲ್ ಸರ್ಕಾಲ್‌ವರೆಗೆ | 5700 |
| 305 | ಗಾಂಧೀಪೇಟೆ ಪೂರ್ವ ಭಾಗ | 8000 |
| 306 | ರಂಗನಾಥ್‌ಸ್ವಾಮಿ ರಸ್ತೆ (ಶಿಶುವಿಹಾರ) | 7700 |
| | **ತುಮಕೂರು ಜಿಲ್ಲೆ. ಚಿಕ್ಕನಾಯಕನಹಳ್ಳಿ ಪುರಸಭೆ ವ್ಯಾಪ್ತಿಯ ವಾಣಿಜ್ಯ ಸ್ವತ್ತುಗಳ (ನಿವೇಶಗಳ) ಮಾರ್ಗಸೂಚಿ ಪಟ್ಟಿ** | |
| | **ಚಿಕ್ಕನಾಯಕನಹಳ್ಳಿ ಪುರಸಭೆ ವ್ಯಾಪ್ತಿಯ ನಿವೇಶನಗಳು** | |
| 307 | ನೆಹರು ಸರ್ಕಲ್‌ನಿಂದ ಖಾಸಗಿ ಬಸ್‌ನಿಲ್ದಾಣ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 20200 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 308 | ನೆಹರು ಸರ್ಕಲ್‌ನಿಂದ ಪುರಸಭೆ ಕಛೇರಿ ಮತ್ತು ಅಂಚೆ ಕಛೇರಿ ರಸ್ತೆ | 16000 |
| 309 | ಖಾಸಗಿ ಬಸ್‌ನಿಲ್ದಾಣದಿಂದ ಮತ್ತಿಘಟ್ಟರಸ್ತೆಯವರೆಗೆ | 10700 |
| 310 | ಮತಿಘಟ್ಟರಸ್ತೆಯಿಂದ ಶ್ರೀಲಕ್ಷ್ಮೀನರಸಿಂಹಚಿತ್ರಮಂದಿರ(ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯಹೆದ್ದಾರಿ) | 6800 |
| 311 | ಖಾಸಗಿ ಬಸ್‌ನಿಲ್ದಾಣದಿಂದ ಕುರುಬರಹಳ್ಳಿ ರಸ್ತೆ | 10100 |
| 312 | ನೆಹರು ಸರ್ಕಲ್‌ನಿಂದ ಶೆಟ್ಟೀಕೆರೆ ಗೇಟ್ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 14200 |
| 313 | ಶೆಟ್ಟೀಕೆರೆ ಗೇಟ್ ನಿಂದ ಜೋಗೀಹಳ್ಳಿ ಗೇಟ್ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 12500 |
| 314 | ಶೆಟ್ಟೀಕೆರೆ ಗೇಟ್ ನಿಂದ ವೆಂಕಣ್ಣನಕಟ್ಟೆ | 6500 |
| 315 | ಜೋಗೀಹಳ್ಳಿ ಗೇಟ್‌ನಿಂದ ಆರ್.ಎಂ.ಸಿ.ಯಾರ್ಡ್‌ವರಗೆ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 8300 |
| 316 | ಆರ್ಎಂಸಿಯಾರ್ಡ್‌ನಿಂದತಾಲ್ಲೂಕುಕಚೇರಿಯವರೆಗ(ಬೀದರ್–ಶ್ರೀರಂಗಪಟ್ಟಣರಾಷ್ಟ್ರೀಯಹೆದ್ದಾರಿ | 7700 |
| 317 | ತಾಲ್ಲೂಕು ಕಛೇರಿಯಿಂದ ದಕ್ಷಿಣಕ್ಕೆ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 4800 |
| 318 | ಕೆನರಾ ಬ್ಯಾಂಕ್ ಹಿಂಭಾಗ (ವಾರ್ಡ್ ನಂ 10) | 7100 |
| 319 | ಕುಪ್ಪೂರು ಗೋಪಾಲರಾವ್‌ರವರ ಮನಬಳಿ(ಬಿ.ಹೆಚ್.ರಸ್ತೆ ಹೊರತುಪಡಿಸಿ)(ವಾರ್ಡ್‌ನಂ 10) | 7100 |
| 320 | ಬಿ.ಹೆಚ್.ರಸ್ತೆ ಬಲಬಾಗ (ವಾರ್ಡ್ ನಂ 10) | 20200 |
| 321 | ಖಾಸಗಿ ಬಸ್ ನಿಲ್ದಾಣ(ವಾರ್ಡ್ ನಂ 10) | 20200 |
| 322 | ಕುರುಬರ ಹಳ್ಳಿ ರಸ್ತೆ (ವಾರ್ಡ್ ನಂ 10) | 4100 |
| 323 | ಬೀದರ್ ಶ್ರೀರಂಗಪಟ್ಟಣ ರಸ್ತೆ, ಹುಳಿಯಾರು ರಸ್ತೆ. (ವಾರ್ಡ್ ನಂ 16) | 4500 |
| 324 | ಹುಳಿಯಾರು ರಸ್ತೆ (ಬೀದರ್–ಶ್ರೀರಂಗಪಟ್ಟಣ ರಸ್ತೆ) (ವಾರ್ಡ್ ನಂ 18,19,22,23) | 7100 |
| 325 | ಲಕ್ಷ್ಮೀನರಸಿಂಹ ಟಾಕೀಸ್ ಮುಂಭಾಗ (ವಾರ್ಡ್ ನಂ 18) | 7100 |
| | **ವಾರ್ಡ್ ನಂ 1 ರ ವಾಪ್ತಿ** | |
| 326 | ನೆಹರು ಸರ್ಕಲ್ ಬಳಿ | 7700 |
| 327 | ನೆಹರು ಸರ್ಕಲ್‌ನಿಂದ ಪುರಸಭೆ ಕಛೇರಿ ಮತ್ತು ಅಂಚೆ ಕಛೇರಿ ರಸ್ತೆ | 8300 |
| 328 | ನೆಹರು ಸರ್ಕಾಲ್‌ನಿಂದ ಶೆಟ್ಟೀಕೆರೆ ಗೇಟ್ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 13100 |
| 329 | ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಬಳಿ | 3600 |
| 330 | ತಾತಯ್ಯನಗೋರಿ ಬಳಿ | 3600 |
| 331 | ಎಸ್.ಬಿ.ಎಂ. ಹಿಂಭಾಗ ಹಾಗೂ ಸಂತೆ ಮೈದಾನದ ಬಳಿ | 6000 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 332 | ಶೆಟ್ಟೀಕೆರೆ ಗೇಟ್ ನಿಂದ ಜೋಗೀಹಳ್ಳಿ ಗೇಟ್ (ಬೀದರ್–ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 10700 |
| 333 | ದಶಾವತಾರ ದೇವಸ್ಥಾನದ ಬಳಿ | 6000 |
| 334 | ಎನ್.ಜಿ.ಹೌಸ್ ಜೋಗಿಹಳ್ಳಿ ಎ.ಕೆ.ಕಾಲೋನಿ ವರೆಗೆ (ವಿದ್ಯಾನಗರ) | 6000 |
| 335 | ಎಸ್.ಎಂ.ಎಸ್. ಕಾಲೇಜು ಬಳಿ | 6000 |
| 336 | ಸರ್ಕಾರಿ ಜ್ಯೂನಿಯರ್ ಕಾಲೇಜು ಬಳಿ | 3700 |
| | **ವಾರ್ಡ್ ನಂ 2 ರ ವ್ಯಾಪ್ತಿ** | |
| 337 | ಜೋಗಿಹಳ್ಳಿ ಬಡಾವಣೆ | 3000 |
| 338 | ಜೋಗಿಹಳ್ಳಿ ಎ.ಡಿ.ಕಾಲೋನಿ | 2600 |
| 339 | ಜೋಗಿಹಳ್ಳಿ | 2600 |
| | **ವಾರ್ಡ್ ನಂ 3 ರ ವ್ಯಾಪ್ತಿ** | |
| 340 | ಎನ್.ಜಿ.ಓ. ಕ್ವಾಟ್ರಸ್ ಹಿಂಬಾಗ(ವಿದ್ಯಾನಗರ ದಕ್ಷಿಣ ಭಾಗ) | 4200 |
| 341 | ಜೋಗಿಹಳ್ಳಿ ರಸ್ತೆ –ಜ್ಞಾನ ನಿಧಿ ಸ್ಕೂಲ್ | 4200 |
| 342 | ಆದಿ ಅಂಜನೇಯ ಸ್ವಾಮಿ ದೇವಾಲಯದ ಬಳಿ | 3700 |
| 343 | ತಹಸೀಲ್ದಾರ್ ಕ್ವಾಟ್ರಸ್ ಬಳಿ | 4800 |
| 344 | ನ್ಯಾಯಲಯದ ಕಟ್ಟಡದ ಹಿಂಭಾಗ | 4800 |
| 345 | ಪೆಟ್ರೋಲ್ ಬಂಕ್ ಹಿಂಭಾಗ | 4800 |
| 346 | ತಾಲ್ಲೂಕು ಕಛೇರಿ ಹಿಂಭಾಗ ಮತ್ತು ಉತ್ತರ ಬಾಗ | 4200 |
| | **ವಾರ್ಡ್ ನಂ 4 ರ ವ್ಯಾಪ್ತಿ** | |
| 347 | ಜಗಜೀವನ್ ರಾಂನಗರ | 1800 |
| 348 | ತಾಲ್ಲೂಕು ಕಛೇರಿ ದಕ್ಷಿಣ ಭಾಗ | 3700 |
| 349 | ದಬ್ಬೇಘಟ್ಟ | 2600 |
| | **ವಾರ್ಡ್ ನಂ 5 ರ ವ್ಯಾಪ್ತಿ** | |
| 350 | ಸುಬ್ಬು ಡಾಬದ ಹಿಂಭಾಗದ ಪ್ರದೇಶ | 2600 |
| 351 | ದಬ್ಬೇಘಟ್ಟ ಕೆರೆ ಸಮೀಪ | 2600 |
| 352 | ತಾಲ್ಲೂಕು ಕಛೇರಿ ಹಿಂಭಾಗ | 3700 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 353 | ಕೃಷಿ ಇಲಾಖೆ ಹಿಂಭಾಗ | 4800 |
| 354 | ಸರ್ವಜನಿಕ ಆಸ್ಪತ್ರೆ ಹಿಂಭಾಗ | 4800 |
| 355 | ಆರ್.ಎಂ.ಸಿ.ಯಾಡ್ ಹಿಂಭಾಗ | 4800 |
| 356 | ಬೆಸ್ಕಾಮ್ ಕಛೇರಿ ಹಿಂಭಾಗ | 3700 |
| 357 | ಚೌಕಿ ಮಠದ ಪ್ರದೇಶ | 3700 |
| 358 | ದೇಶೀಯ ವಿದ್ಯಾಪೀಠ ಹೈಸ್ಕೂಲ್ ಹಿಂಭಾಗ | 3700 |
| 359 | ವಿನಾಯಕ ನಗರ | 3700 |
| 360 | ಪಶು ಆಸ್ಪತ್ರೆ ಹಿಂಭಾಗ | 6000 |
| 361 | ಬನಶಂಕರಿ ಬಡಾವಣೆ | 3700 |
| 362 | ಮೋಚಿ ಕಾಲೋನಿ | 2600 |
| | **ವಾರ್ಡ್ ನಂ 6 ರ ವಾಪ್ತಿ** | |
| 363 | ಕೇದಿಗೆ ಹಳ್ಳಿ | 2600 |
| 364 | ಕೇದಿಗೆ ಹಳ್ಳಿ ಪಾಳ್ಯ ಮತ್ತು ಗುಂಡು ತೋಪು | 2600 |
| 365 | ಕಲ್ಲೇನಹಳ್ಳಿ ಪಾಳ್ಯ | 2600 |
| 366 | ಹೊಸೂರು ನಿಂಗಯ್ಯನ ಪಾಳ್ಯ | 2600 |
| 367 | ಪೋಲೀಸ್ ಕ್ವಾಟ್ರಸ್ ಬಳಿ | 3700 |
| | **ವಾರ್ಡ್ ನಂ 7 ರ ವಾಪ್ತಿ** | |
| 368 | ಬಸವೇಶ್ವರ ನಗರ | 2600 |
| 369 | ಕುರುಬರಹಳ್ಳಿ | 2600 |
| | **ವಾರ್ಡ್ ನಂ 8 ರ ವಾಪ್ತಿ** | 0 |
| 370 | ಬನಶಂಕರಿ ಬಡಾವಣೆ | 2600 |
| 371 | ಮಹಾಲಕ್ಷ್ಮೀ ಬಡಾವಣೆ | 5400 |
| 372 | ಕುರುಬರಹಳ್ಳಿ | 2600 |
| 373 | ಮಹಾಲಕ್ಷ್ಮೀ ಬಡಾವಣೆ ಚಿತ್ರಮಂದಿರ ಹಿಂಭಾಗ | 5400 |
| | **ವಾರ್ಡ್ ನಂ 9 ರ ವಾಪ್ತಿ** | |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 374 | ಆರೋಗ್ಯ ಇಲಾಖೆಯ ವಸತಿ ಗೃಹ ಮತ್ತು ಹಿಂದಿನ ಸಾರ್ವಜನಿಕ ಆಸ್ಪತ್ರೆ ಹಿಂಭಾಗ | 3700 |
| 375 | ಎ.ಡಿ.ಕಾಲೋನಿ/ಬೊವಿ ಕಾಲೋನಿ. | 2600 |
| 376 | ವಿನಾಯಕ ನಗರ | 3000 |
| 377 | ಪಶು ಆಸ್ಪತ್ರೆ ಹಿಂಭಾಗ/ಹಳೇ ಆಕ್ಟ್ರಯ್ ಕಛೇರಿ ಹಿಂಭಾಗ | 3700 |
| 378 | ಶ್ರೀನಿವಾಸ ಚಿತ್ರಮಂದಿರ ಬಳಿ /ಆರಕ್ಷಕ ಠಾಣೆ ಬಳಿ | 4800 |
| 379 | ದಾಸು ಆಸ್ಪತ್ರೆ ಹಿಂಭಾಗ | 4800 |
| 380 | ಮಹಾಲಕ್ಷ್ಮೀ ಚಿತ್ರಮಂದಿರ ಮುಂಭಾಗ | 5400 |
| | **ವಾರ್ಡ್ ನಂ 10 ರ ವಾಪ್ತಿ** | |
| 381 | ಶಾಂತಿನಿವಾಸ | 2600 |
| 382 | ಆಂಚೆ ಕಛೇರಿ ಬಳಿ | 4800 |
| 383 | ಅರಳೇ ಪೇಟೆ | 2600 |
| 384 | ಬ್ರಾಹ್ಮಣರ ಬೀದಿ | 4800 |
| 385 | ಕುಂಬಾರರ ಬೀದಿ | 2600 |
| 386 | ಕೆನರಾ ಬ್ಯಾಂಕ್ ಹಿಂಭಾಗ | 4800 |
| 387 | ಕುಪ್ಪೂರು ಗೋಪಾಲರಾವ್‌ರವರ ಮನೆ ಬಳಿ (ಬಿ.ಹೆಚ್.ರಸ್ತೆ ಹೊರತುಪಡಿಸಿ) | 4800 |
| 388 | ಬಿ.ಹೆಚ್.ರಸ್ತೆ ಬಲಬಾಗ | 17800 |
| 389 | ಖಾಸಗಿ ಬಸ್ ನಿಲ್ದಾಣ | 17800 |
| 390 | ಕುರುಬರ ಹಳ್ಳಿ ರಸ್ತೆ | 2600 |
| 391 | ಹೊಸಬಾಗಿಲು ಮೂಲೆ | 3000 |
| | **ವಾರ್ಡ್ ನಂ 11 ರ ವಾಪ್ತಿ** | |
| 392 | ಕರಿಸಿದ್ದೇಶ್ವರ ಮಠದ ಬಳಿ | 3700 |
| 393 | ದೇವಾಂಗ ಬೀದಿ | 3700 |
| 394 | ಮತ್ತಿಘಟ್ಟ ರಸ್ತೆ | 2600 |
| 395 | ಮತಿಘಟ್ಟರಸ್ತೆಯಿಂದ ಶ್ರೀಲಕ್ಷ್ಮೀನರಸಿಂಹಚಿತ್ರ ಮಂದಿರ(ಬೀದರ್-ಶ್ರೀರಂಗಪಟ್ಟಣ ರಾಷ್ಟ್ರೀಯ ಹೆದ್ದಾರಿ) | 4800 |
| 396 | ಬನಶಂಕರಿ ದೇವಸ್ಥಾನದ ರಸ್ತೆ | 2600 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 397 | ಮಲ್ಲಪ್ಪನ ಬೀದಿ ರಸ್ತೆ | 3000 |
| 398 | ಹುಳಿಯರು ರಸ್ತೆ (ಶ್ರೀಲಕ್ಷ್ಮೀನರಸಿಂಹ ಚಿತ್ರಮಂದಿರದಿಂದ ಉತ್ತರಕ್ಕೆ) | 3700 |
| 399 | ಬನಶಂಕರಿ ಚಾಟ್ರಿ ಪ್ರದೇಶ | 3700 |
| 400 | ಹೊಸಬಾಗಿಲು ಮೂಲೆ ಪ್ರದೇಶ | 3000 |
| 401 | **ವಾರ್ಡ್ ನಂ 12 ರ ವಾಪ್ತಿ** | |
| 402 | ಬ್ರಹಪುರಿ ಆಂಜನೇಯ ದೇವಸ್ಥಾನದ ಬಳಿ | 3700 |
| 403 | ಕರಿ ಸಿದ್ದೇಶ್ವರ ದೇವಸ್ಥಾನ ಬಲಭಾಗ | 3700 |
| 404 | ದೇವಾಂಗ ಬೀದಿ | 3700 |
| 405 | ಸರ್ಕಾರಿ ಮಾದ್ಯಮ ಬಾಲಕಿಯರ ಮಾಧ್ಯಮಿಕ ಶಾಖೆ ಬಳಿ | 3700 |
| 406 | ಕುಂಬಾರರ ಬೀದಿ | 2600 |
| 407 | ಕಳಸಯ್ಯನ ಫ್ಲೋರ್ ರಸ್ತೆ (ಸಿ.ಬಿ.ಮಲ್ಲಪ್ಪ ರಸ್ತೆ) | 3000 |
| 408 | ಶ್ರೀಲಕ್ಷ್ಮೀ ರಂಗನಾಥ ಮೀಲ್ ರಸ್ತೆ | 3000 |
| 409 | ವೆಂಕಟರಮಣ ಸ್ವಾಮಿ ದೇವಸ್ಥಾನದ ಹಿಂಭಾಗ | 2600 |
| 410 | ಹಳ್ಳಿಕಾರರ ಬೀದಿ | 2600 |
| | **ವಾರ್ಡ್ ನಂ 13ರ ವಾಪ್ತಿ** | |
| 411 | ಕುಂಬಾರರ ಬೀದಿ | 2200 |
| 412 | ಅರಳೇ ಪೇಟೆ | 2600 |
| 413 | ಕಣ್ಣಪ್ಪ ದೇವಸ್ಥಾನದ ಹಿಂಭಾಗ | 2600 |
| 414 | ಹಳ್ಳಿಕಾರರ ಬೀದಿ (ಭಾಗಶಃ) | 2600 |
| 415 | ಮಾರ್ಕೇಟ್ ಬಳಿ/ ವೆಂಕಟರಮಣಸ್ವಾಮಿ ದೇವಸ್ಥಾನದ ಬಳಿ | 1800 |
| 416 | ನಿರ್ವಾಣ ಸ್ವಾಮಿ ದೇವಸ್ಥಾನದ ಹಿಂಭಾಗ | 2600 |
| | **ವಾರ್ಡ್ ನಂ 14 ರ ವಾಪ್ತಿ** | |
| 417 | ಅರಳೇ ಪೇಟೆ | 2600 |
| 418 | ಸರ್ಪ ವಕ್ಕಲಿಗರ ಬೀದಿ | 1800 |
| 419 | ಕಲ್ಪವೃಕ್ಷ ಕೋ–ಆಪರೇಟೀವ್ ಬ್ಯಾಂಕ್ ಬಳಿ | 1800 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 420 | ಹಾಲವಾಡಿ ಗೇಟ್ ಬಳಿ | 1800 |
| 421 | ಉಡೇವು ಬೀದಿ | 2200 |
| 422 | ವಕ್ಕಲಗೇರಿ | 2200 |
| 423 | ತೇರು ಬೀದಿ | 1800 |
| 424 | ಧರ್ಮಾವರದ ಬೀದಿ | 1800 |
| | | |
| | **ವಾರ್ಡ್ ನಂ 15 ರ ವಾಪ್ತಿ** | |
| 425 | ಮಾರ್ಕೇಟ್ ರಸ್ತೆ | 2600 |
| 426 | ಉಡೇವು ಬೀದಿ | 2200 |
| 427 | ಪುರಸಭೆ ಕಸಾಯಿ ಖಾನೆ ಬಳಿ | 1800 |
| 428 | ಧರ್ಮಾವರದ ಬೀದಿ | 1800 |
| | **ವಾರ್ಡ್ ನಂ 16 ರ ವಾಪ್ತಿ** | |
| 429 | ವೆಂಕಟರಮಣಸ್ವಾಮಿ ದೇವಸ್ಥಾನ ಹಿಂಭಾಗ | 2600 |
| 430 | ದೇವಾಂಗ ಬೀದಿ | 3700 |
| 431 | ಕುರುಬರಶ್ರೇಣಿ ಸ್ಕೂಲ್ ಬಳಿ | 2600 |
| 432 | ಬಟ್ಟರ ಬೀದಿ | 2600 |
| 433 | ಮುಸ್ಲಿಂ ಬ್ಲಾಕ್ | 2600 |
| 434 | ಬುಗುರಿ ಮರದ ಬಳಿ | 1800 |
| 435 | ಉಡೇವು ಬೀದಿ | 2200 |
| 436 | ಬೀದರ್ ಶ್ರೀರಂಗಪಟ್ಟಣ ರಸ್ತೆ, ಹುಳಿಯಾರು ರಸ್ತೆ. | 4800 |
| | | |
| | **ವಾರ್ಡ್ ನಂ 17 ರ ವಾಪ್ತಿ** | |
| 437 | ಲಿಂಗನಾಯಕಹಟ್ಟಿ | 1800 |
| 438 | ಕಾಳಮ್ಮನಗುಡಿ ಬೀದಿ | 2600 |
| 439 | ಪೇಟೆ ಬೀದಿ (ಭಾಗಶಃ) | 1800 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| 440 | ನವೋದಯ ಕಾನ್ವೆಂಟ್ ಬಳಿ | 1800 |
| 441 | ಹಳೇಸಂದಿ ಅಂಗಡಿ ಬೀದಿ | 1800 |
| 442 | ಸಂಪನಬಾವಿ ಮುಂಭಾಗ | 1800 |
| 443 | ಮಟನ್ ಮಾರ್ಕೆಟ್ ಬಳಿ | 1800 |
| | **ವಾರ್ಡ್ ನಂ 18 ರ ವಾಪ್ತಿ** | |
| 444 | ಹುಲ್ಲೇಕೆರೆ ಬಾವಿ ಬಳಿ | 1800 |
| 445 | ಶಿವಪ್ಪನ ಗುಡಿ ಬಳಿ | 1800 |
| 446 | ಹುಳಿಯಾರು ರಸ್ತೆ (ಬೀದರ್–ಶ್ರೀರಂಗಪಟ್ಟಣ ರಸ್ತೆ) | 4800 |
| 447 | ಲಕ್ಷ್ಮೀನರಸಿಂಹ ಟಾಕೀಸ್ ಮುಂಭಾಗ | 4800 |
| 448 | ಮಲ್ಲಪ್ಪನಬಾವಿ ಬಳಿ | 3700 |
| 449 | ಹೊಂಬಾಳಮ್ಮನ ದೇವಸ್ಥಾನದ ಮುಂಭಾಗ | 1800 |
| 450 | ಹಳೇಸೇಂದಿ ಅಂಗಡಿ ಬಳಿ | 1800 |
| 451 | ಸಿದ್ದೇಶ್ವರ ಮಠದ ಬಳಿ | 1800 |
| 452 | ಕುರುಬರಶ್ರೇಣಿ (ಭಾಗಶಃ) | 2600 |
| | **ವಾರ್ಡ್ ನಂ 19 ರ ವಾಪ್ತಿ** | |
| 453 | ಹುಳಿಯಾರು ರಸ್ತೆ (ಬೀದರ್–ಶ್ರೀರಂಗಪಟ್ಟಣ ರಸ್ತೆ) | 4800 |
| 454 | ಕಂಬಳಿ ಸೊಸೈಟಿ ಹಿಂಭಾಗ | 1800 |
| 455 | ಮಣಿದೀರನಹಟ್ಟಿ | 1500 |
| 456 | ಹಿರಿಯಣ್ಣನಹಟ್ಟಿ | 1500 |
| 457 | ಕಾಳಮ್ಮನದೇವಸ್ಥಾನದ ಹಿಂಭಾಗ | 1800 |
| 458 | ಪೇಟೆ ಬೀದಿ | 1800 |
| 459 | ರೇವಣ್ಣಪ್ಪನ ಮಠದ ಬಳಿ | 1800 |
| 460 | ಉದ್ರಿ ಹಟ್ಟಿ | 1800 |
| 461 | ಬಂಡಾರಿ ಹಟ್ಟಿ | 1421 |
| 462 | ಹೊಸಬೀದಿ ದಕಿಣ ಭಾಗ | 1800 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| | **ವಾರ್ಡ್ ನಂ 20 ರ ವಾಪ್ತಿ** | |
| 463 | ಕನಕದಾಸನಗರ | 1500 |
| 464 | ರೇವಣ್ಣಮಠದ ಹಿಂಭಾಗ | 1800 |
| 465 | ಬಂಡಾರಿಹಟ್ಟಿ | 1500 |
| 466 | ರುದ್ರನಗುಡಿ ಹಿಂಭಾಗ | 1800 |
| 467 | ಶುಕ್ರವಾರ ಬಾಗಿಲು ಬಳಿ | 1800 |
| 468 | ಮಡಿವಾಳರ ಹಟ್ಟಿ | 1500 |
| 469 | ಹೊಸಬೀದಿ | 1800 |
| | **ವಾರ್ಡ್ ನಂ 21 ರ ವಾಪ್ತಿ** | |
| 470 | ಆಂ ಜನೇಯ ಗುಡಿಬೀದಿ | 2600 |
| 471 | ಧರ್ಮಾವರದ ಬೀದಿ | 1800 |
| 472 | ರುದ್ರನ ಗುಡಿ ಮುಂಭಾಗ | 1800 |
| 473 | ಜೋಗಿಬಾವಿ ಸಂದಿ | 1500 |
| 474 | ಶುಕ್ರವಾರದ ಬಾಗಿಲು | 1800 |
| 475 | ಬ್ಯಾಲದ ಕೆರೆ ರಸ್ತೆ | 1500 |
| 476 | ಎ.ಕೆ.ಕಾಲೋನಿ ಹಳೇಹಟ್ಟಿ | 1500 |
| 477 | ಪ್ರಸನ್ನ ರಾಮೇಶ್ವರ ದೇವಸ್ಥಾನದ ಹಿಂಭಾಗ | 2600 |
| | **ವಾರ್ಡ್ ನಂ 22 ರ ವಾಪ್ತಿ** | |
| 478 | ಹೊಸಬೀದಿ | 1800 |
| 479 | ಮಲಿಯಪ್ಪನ ಬೀದಿ | 1800 |
| 480 | ಹಿಂದಲಬೀದಿ | 1800 |
| 481 | ಯಂಗೋಜಿ ಬೀಳು ರಸ್ತೆ | 1500 |
| 482 | ನಾಯಕರ ಬೀದ | 1500 |
| 483 | ಪಂಪ್–ಹೌಸ್ ಮುಂಭಾಗ | 1800 |
| 484 | ಬೀದರ್ ಶ್ರೀರಂಗಪಟ್ಟಣ ರಸ್ತೆ (ಹುಳಿಯಾರು ರಸ್ತೆ) | 4800 |

| ಕ್ರ.ಸಂ | ಹುಳಿಯಾರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಡುವ ನಿವೇಶನಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ | ನಿವೇಶನ (ರೂ.ಗಳಲ್ಲಿ) ಚದುರ ಮೀಟರ್ ಗಳಲ್ಲಿ |
|---|---|---|
| | **ವಾರ್ಡ್ ನಂ 23 ರ ವಾಪ್ತಿ** | |
| 485 | ಅಂಬೇಡ್ಕರ್ ನಗರ | 1800 |
| 486 | ಮಾರುತಿ ನಗರ | 1500 |
| 487 | ನಾಯಕರ ಬೀದಿ | 1500 |
| 488 | ವೀರಲಕ್ಕಯ್ಯನ ಬಡಾವಣೆ | 1500 |
| 489 | ಬೀದರ್ ಶ್ರೀರಂಗಪಟ್ಟಣ ರಸ್ತೆ (ಹುಳಿಯಾರು ರಸ್ತೆ) | 4800 |
| 490 | ದಾಶಿಹಳ್ಳಿ | 1500 |
| 491 | ನಾರಿನ ಪ್ಯಾಕ್ಟರಿ ಬಳಿ | 1500 |
| | | |

ಅಧ್ಯಕ್ಷರು, ಕೇಂದ್ರ ಮೌಲ್ಯ ಮಾಪನ ಸಮಿತಿ, ಬೆಂಗಳೂರು ಇವರ ಆದೇಶದ ಮೇರೆಗೆ,

**ಬಿ. ಸುರೇಂದ್ರ**
ಸದಸ್ಯ ಕಾರ್ಯದರ್ಶಿ.
ಕೇಂದ್ರ ಮೌಲ್ಯ ಮಾಪನ ಸಮಿತಿ, ಬೆಂಗಳೂರು.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) (200 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *III* | ಬೆಂಗಳೂರು, ಗುರುವಾರ, ಮೇ ೫, ೨೦೧೬ (ವೈಶಾಖ ೧೫, ಶಕ ವರ್ಷ ೧೯೩೮) | ನಂ. ೭೧೩ |
|---|---|---|
| ***Part–III*** | ***Bengaluru, Thursday, May 5, 2016 (Vaishaka 15, Shaka Varsha 1938)*** | ***No. 713*** |

**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 48 ಶಾಸನ 2015, ಬೆಂಗಳೂರು, ದಿನಾಂಕ: 05.05.2016**

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2016ಕ್ಕೆ 2016ರ ಏಪ್ರಿಲ್ ತಿಂಗಳ ಇಪ್ಪತ್ತೊಂಭತ್ತನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2016ರ ಕರ್ನಾಟಕ ಅಧಿನಿಯಮ ಸಂಖ್ಯೆ:14 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2016ರ ಕರ್ನಾಟಕ ಅಧಿನಿಯಮ ಸಂಖ್ಯೆ: 14**

(2016ರ ಮೇ ತಿಂಗಳ ಐದನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2016**

(2016ರ ಏಪ್ರಿಲ್ ತಿಂಗಳ ಇಪ್ಪತ್ತೊಂಭತ್ತನೇ ದಿನಾಂಕದಂದು ರಾಜ್ಯಪಾಲರಿಂದ ಒಪ್ಪಿಗೆಯನ್ನು ಪಡೆಯಲಾಗಿದೆ)

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರವನ್ನು ಅಂತರ–ರಾಷ್ಟ್ರೀಯ ಪಾರಂಪರಿಕ ತಾಣವನ್ನಾಗಿ, ಸಾಂಸ್ಕೃತಿಕ ಮತ್ತು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಗೊಳಿಸಲು ಮತ್ತು ಅದನ್ನು ನಿರ್ವಹಿಸಲು ಒಂದು ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಉಪಬಂಧವನ್ನು ಕಲ್ಪಿಸಲು ಒಂದು ಅಧಿನಿಯಮ.

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರವನ್ನು ಅಂತರ–ರಾಷ್ಟ್ರೀಯ ಪಾರಂಪರಿಕ ತಾಣವನ್ನಾಗಿ, ಸಾಂಸ್ಕೃತಿಕ ಮತ್ತು ಪ್ರವಾಸಿ ಕೇಂದ್ರವನ್ನಾಗಿ ಅಭಿವೃದ್ಧಿಗೊಳಿಸಲು ಮತ್ತು ಅದನ್ನು ನಿರ್ವಹಿಸಲು ಒಂದು ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಉಪಬಂಧವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.

**ಅಧ್ಯಾಯ – I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಮತ್ತು ಪಾರಂಪರಿಕ ತಾಣದ ಪ್ರದೇಶಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಸೌಕರ್ಯ"** ಎಂಬುದರಲ್ಲಿ ರಸ್ತೆಗಳು, ಬೀದಿಗಳು, ಸುರಂಗ ಮಾರ್ಗಗಳು, ದೀಪದ ವ್ಯವಸ್ಥೆ, ಚರಂಡಿ ವ್ಯವಸ್ಥೆ, ನೈರ್ಮಲೀಕರಣಗಳು, ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು ಅಥವಾ ಇತರ ಅನುಕೂಲತೆಗಳು, ಲೋಕೋಪಯೋಗಿ ಕಾಮಗಾರಿಗಳು, ಮಾರುಕಟ್ಟೆ ಸ್ಥಳಗಳು, ಅಂಚೆ ಕಚೇರಿಗಳು, ಬ್ಯಾಂಕುಗಳು, ಆಸ್ಪತ್ರೆಗಳು, ಚಿಕಿತ್ಸಾಲಯಗಳು, ಪೋಲೀಸ್ ಠಾಣೆಗಳು, ನ್ಯಾಯಬೆಲೆ ಅಂಗಡಿಗಳು, ಹಾಲಿನ ಬೂತುಗಳು, ಗ್ರಂಥಾಲಯಗಳು, ಮನರಂಜನಾ ಕೇಂದ್ರಗಳು, ಪ್ರಾಧಿಕಾರವು ಅಧಿಕೃತಗೊಳಿಸಿದ ಯಾವುದೇ ಸಾರ್ವಜನಿಕ ಉಪಯುಕ್ತ ಸೇವೆಯ ಸೇವಾ ಕೇಂದ್ರಗಳು ಅಥವಾ ಇತರ ಸೌಲಭ್ಯಗಳು; ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸೌಕರ್ಯಗಳನ್ನು ಒಳಗೊಳ್ಳುತ್ತದೆ;

(ಬಿ) **"ಪ್ರಾಧಿಕಾರ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ;

(ಸಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಡಿ) "ಆಯುಕ್ತ" ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಿಸಲ್ಪಟ್ಟ ಪ್ರಾಧಿಕಾರದ ಆಯುಕ್ತ;

(ಇ) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಎಫ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಜಿ) "ಪಾರಂಪರಿಕ ತಾಣ" ಎಂದರೆ, ಪ್ರಾಚೀನ ಸ್ಮಾರಕಗಳು ಮತ್ತು ಐತಿಹಾಸಿಕ ಸ್ಥಳಗಳು ಹಾಗೂ ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ ಸಂಖ್ಯೆ 24) ಅಡಿಯಲ್ಲಿ ಸಂರಕ್ಷಿತ ಪ್ರದೇಶವೆಂದು ಉಲ್ಲೇಖಿಸಲಾದ ಪ್ರದೇಶವನ್ನು ಹೊರತುಪಡಿಸಿ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ತಾಣಗಳನ್ನು ಒಳಗೊಳ್ಳುವ ಸಂಪೂರ್ಣ ಪ್ರದೇಶವಾಗಿದೆ;

(ಹೆಚ್) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಐ) "ವಿನಿಯಮಗಳು" ಎಂದರೆ, 45ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರಾಧಿಕಾರದ ವಿನಿಯಮಗಳು;

(ಜೆ) **"ಸಂಗೊಳ್ಳಿ ರಾಯಣ್ಣ ಕ್ಷೇತ್ರ"** ಎಂದರೆ, ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಸಂಗೊಳ್ಳಿ ಮತ್ತು ನಂದಗಡ ಗ್ರಾಮದ ಮಿತಿಗಳು ಮತ್ತು ಈ ಗ್ರಾಮಗಳಿಂದ ಹನ್ನೆರಡು ಕಿಲೋಮೀಟರುಗಳೊಳಗಿನ ಪ್ರದೇಶ ಹಾಗೂ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಮತ್ತು ಪಾರಂಪರಿಕ ತಾಣಗಳ ಅಭಿವೃದ್ಧಿಗಾಗಿ ಸರ್ಕಾರವು ಕಾಲಕಾಲಕ್ಕೆ ಆರ್ಜಿಸಬಹುದಾದ ಭೂಮಿ ಹಾಗೂ ಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರದೇಶವನ್ನು ಒಳಗೊಳ್ಳುತ್ತದೆ;

(ಕೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಿದ ಅನುಸೂಚಿ.

## ಅಧ್ಯಾಯ – II
## ಪ್ರಾಧಿಕಾರ ಮತ್ತು ಅದರ ಉದ್ಯೋಗಿಗಳು

**3. ಪ್ರಾಧಿಕಾರದ ರಚನೆ.**– (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದ ಅಂಥ ಸ್ಥಳದಲ್ಲಿ ಪ್ರಾಧಿಕಾರವು ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

| | |
|---|---|
| (ಎ) ಕರ್ನಾಟಕದ ಮುಖ್ಯ ಮಂತ್ರಿಯವರು | – ಅಧ್ಯಕ್ಷರು |
| (ಬಿ)ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಪ್ರಭಾರದಲ್ಲಿರುವ ಸಚಿವರು | – ಸಹ ಅಧ್ಯಕ್ಷರು |
| (ಸಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಸಚಿವರು | – ಪದನಿಮಿತ್ತ ಸದಸ್ಯರು |
| (ಡಿ) ಕಂದಾಯ ಇಲಾಖೆಯ ಪ್ರಭಾರದಲ್ಲಿರುವ ಸಚಿವರು | – ಪದನಿಮಿತ್ತ ಸದಸ್ಯರು |
| (ಇ) ಬೆಳಗಾವಿ ಜಿಲ್ಲೆಯ ಉಸ್ತುವಾರಿ ಪ್ರಭಾರದಲ್ಲಿರುವ ಸಚಿವರು | – ಪದನಿಮಿತ್ತ ಸದಸ್ಯರು |
| (ಎಫ್) ಸಂಗೊಳ್ಳಿ ರಾಯಣ್ಣ ಕ್ಷೇತ್ರದ ಭಾಗಶ: ಅಥವಾ ಸಂಪೂರ್ಣವಾಗಿ ಯಾರ ಚುನಾವಣಾ ಕ್ಷೇತ್ರದ ವ್ಯಾಪ್ತಿಯೊಳಗೆ ಬರುತ್ತದೋ ಆ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು | – ಸದಸ್ಯರು |
| (ಜಿ) ಅಧ್ಯಕ್ಷರು, ಜಿಲ್ಲಾ ಪಂಚಾಯತಿ, ಬೆಳಗಾವಿ | – ಪದನಿಮಿತ್ತ ಸದಸ್ಯರು |
| (ಎಚ್) ಸಂಗೊಳ್ಳಿ ರಾಯಣ್ಣನ ಬಗ್ಗೆ ಪರಿಕಲ್ಪನೆಯುಳ್ಳ ಸರ್ಕಾರದಿಂದ ನಾಮನಿರ್ದೇಶಿತರಾದ ಐದು ಜನರಿಗೆ ಮೀರದಷ್ಟು ಸದಸ್ಯರು | – ಸದಸ್ಯರು |
| (ಐ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | – ಪದನಿಮಿತ್ತ ಸದಸ್ಯರು |
| (ಜೆ) ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – ಪದನಿಮಿತ್ತ ಸದಸ್ಯರು |
| (ಕೆ) ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ | – ಪದನಿಮಿತ್ತ ಸದಸ್ಯರು |
| (ಎಲ್) ಸರ್ಕಾರದ ಕಾರ್ಯದರ್ಶಿ, ಹಣಕಾಸು ಇಲಾಖೆ | – ಪದನಿಮಿತ್ತ ಸದಸ್ಯರು |
| (ಎಂ) ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | – ಪದನಿಮಿತ್ತ ಸದಸ್ಯರು |
| (ಎನ್) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕೆರೆ ಅಭಿವೃದ್ಧಿ ಪ್ರಾಧಿಕಾರ | – ಪದನಿಮಿತ್ತ ಸದಸ್ಯರು |
| (ಒ) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ | – ಪದನಿಮಿತ್ತ ಸದಸ್ಯರು |
| (ಪಿ) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – ಪದನಿಮಿತ್ತ ಸದಸ್ಯರು |
| (ಕ್ಯೂ) ಆಯುಕ್ತರು, ಪ್ರವಾಸೋದ್ಯಮ ಇಲಾಖೆ | – ಪದನಿಮಿತ್ತ ಸದಸ್ಯರು |
| (ಆರ್) ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಖಾನಾಪುರ | – ಪದನಿಮಿತ್ತ ಸದಸ್ಯರು |
| (ಎಸ್) ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತಿ, ಬೈಲಹೊಂಗಲ. | – ಪದನಿಮಿತ್ತ ಸದಸ್ಯರು |
| (ಟಿ) ಅಧ್ಯಕ್ಷರು, ಗ್ರಾಮಪಂಚಾಯತಿ, ನಂದಗಡ | – ಪದನಿಮಿತ್ತ ಸದಸ್ಯರು |
| (ಯು) ಅಧ್ಯಕ್ಷರು, ಗ್ರಾಮಪಂಚಾಯತಿ, ಸಂಗೊಳ್ಳಿ | – ಪದನಿಮಿತ್ತ ಸದಸ್ಯರು |
| (ವಿ) ಪ್ರಾಧಿಕಾರ ಆಯುಕ್ತರು | – ಸದಸ್ಯ ಕಾರ್ಯದರ್ಶಿ |

**4. ಪದಾವಧಿ ಮತ್ತು ಸೇವಾ ಷರತ್ತುಗಳು.-** (1) ಸರ್ಕಾರದ ಇಚ್ಛೆಗೊಳಪಟ್ಟು, ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು ತನ್ನ ಸ್ವ-ಹಸ್ತದಿಂದ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು. ಆದರೆ ಅವನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ನಿಯಮಿಸಬಹುದಾದಂಥ ಭತ್ಯೆಗಳನ್ನು ಸರ್ಕಾರೇತರ ಸದಸ್ಯರು ಪಡೆಯತಕ್ಕದ್ದು.

**5. ಸದಸ್ಯನ ಪದಕ್ಕೆ ಅನರ್ಹತೆಗಳು.**- ಒಬ್ಬ ವ್ಯಕ್ತಿಯು,-

(ಎ) ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ಸಂಸ್ಥೆ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಿದವನಾಗಿದ್ದರೆ ಅಥವಾ ವಜಾ ಮಾಡಿದವನಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾದ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತಃ ಅವನು ಅಥವಾ ಪಾಲುದಾರನಾಗಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಫ್) ಪ್ರಾಧಿಕಾರದ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾಗಿದ್ದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

- ಅವನು ಸದಸ್ಯನಾಗಿ ನೇಮಕ ಹೊಂದಲು ಅಥವಾ ಸದಸ್ಯನಾಗಿರಲು ಅನರ್ಹನಾಗಿರತಕ್ಕದ್ದು:

ಪರಂತು, ಒಬ್ಬ ವ್ಯಕ್ತಿಯು, ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ಯಾವುದೇ ಜಾಹೀರಾತಿನಲ್ಲಿ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂಬ ಕಾರಣ ಮಾತ್ರದಿಂದಲೇ (ಇ) ಖಂಡದ ಅಡಿಯಲ್ಲಿ ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದುಹಾಕುವುದು.**- ಸರ್ಕಾರವು ಯಾವೊಬ್ಬ ಸದಸ್ಯನನ್ನು,-

(ಎ) ಅವನು 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗಳಲ್ಲಿ ಯಾವುದೇ ಅನರ್ಹತೆಗೆ ಒಳಪಟ್ಟರೆ:

ಪರಂತು, ಯಾವೊಬ್ಬ ಸದಸ್ಯನನ್ನು, ಅವನು ಆ ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ, ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ನೀಡಿದ ಹೊರತು, ತೆಗೆದು ಹಾಕತಕ್ಕದ್ದಲ್ಲ; ಅಥವಾ

(ಬಿ) ಅವನು ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಅವನು ಗೈರು ಹಾಜರಾಗಲು ಪ್ರಾಧಿಕಾರದಿಂದ ಅನುಮತಿಯನ್ನು ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ:

ಪರಂತು, ಈ ಖಂಡವು ಪದನಿಮಿತ್ತ ಸದಸ್ಯರಿಗೆ ಅನ್ವಯವಾಗತಕ್ಕದ್ದಲ್ಲ; ಅಥವಾ

(ಡಿ) ಅವನನ್ನು ಆ ಪದದಲ್ಲಿ ಮುಂದುವರಿಸಿದರೆ, ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವಂತೆ ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಳ್ಳುವನೆಂದು ಸರ್ಕಾರವು ಅಭಿಪ್ರಾಯಪಟ್ಟರೆ:

-ಅವನನ್ನು ತೆಗೆದುಹಾಕತಕ್ಕದ್ದು.

ಪರಂತು, ಯಾವೊಬ್ಬ ಸದಸ್ಯನನ್ನು ಅವನಿಗೆ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ ಹೊರತು, ಈ ಖಂಡದ ಅಡಿಯಲ್ಲಿ ತೆಗೆದು ಹಾಕತಕ್ಕದ್ದಲ್ಲ.

**7. ಮರುನೇಮಕಾತಿಗೆ ಅರ್ಹತೆ.**- ಯಾವೊಬ್ಬ ಸದಸ್ಯನು, ಸದಸ್ಯನಾಗಿರುವುದು ಸಮಾಪ್ತಿಯಾದಾಗ, 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗೊಳಗಾಗದಿರುವಲ್ಲಿ, ಸದಸ್ಯನಾಗಿ ಮರುನೇಮಕ ಹೊಂದಲು ಅರ್ಹನಾಗಿರತಕ್ಕದ್ದು.

**8. ಪ್ರಾಧಿಕಾರದ ಅಧಿಕಾರಗಳು.**- (1) ಈ ಅಧಿನಿಯಮದ ಉದ್ದೇಶಗಳು ಮತ್ತು ಉಪಬಂಧಗಳನ್ನು ಪರಿಣಾಮಗೊಳಿಸಲು ಪ್ರಾಧಿಕಾರವು ಅವಶ್ಯಕವೆಂದು ಅಭಿಪ್ರಾಯಪಡುವಂಥ ಯಾವುವೇ ಕಾರ್ಯಗಳನ್ನು ಮಾಡುವುದಕ್ಕೆ ಸಾಮಾನ್ಯವಾಗಿ ಪ್ರಾಧಿಕಾರವು ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವುದು ಯಾವುದೂ, ಯಾವುದೇ ಇತರ ಪ್ರಾಧಿಕಾರವು ನೆರವೇರಿಸಬೇಕೆಂದು ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಹೇಳಿದಂಥ ಯಾವುದೇ ಕಾರ್ಯವನ್ನು ನೆರವೇರಿಸಲು ಈ ಪ್ರಾಧಿಕಾರವನ್ನು ಅಧಿಕೃತಗೊಳಿಸಲಾಗಿದೆಯೆಂದು ಭಾವಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಪ್ರಾಧಿಕಾರವು,

(ಎ) ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು ಈ ಅಧಿನಿಯಮದ ಯಾವುದೇ ಉದ್ದೇಶವನ್ನು ನೆರವೇರಿಸಲು ಅವಶ್ಯಕ ಅಥವಾ ಯುಕ್ತವೆಂದು ತಾನು ಪರಿಗಣಿಸುವಂತಹ ಎಲ್ಲ ಕರಾರುಗಳನ್ನು ಮಾಡಿಕೊಳ್ಳಲು ಮತ್ತು ನೆರವೇರಿಸಲು ಅಧಿಕಾರವನ್ನು ಹೊಂದಿರತಕ್ಕದ್ದು. ಹಾಗೂ ಪ್ರತಿಯೊಂದು ಕರಾರನ್ನು ಪ್ರಾಧಿಕಾರದ ಪರವಾಗಿ ಆಯುಕ್ತರು ಮಾಡಿಕೊಳ್ಳತಕ್ಕದ್ದು:

ಪರಂತು, ಐದು ಲಕ್ಷ ರೂಪಾಯಿಗಳು ಅಥವಾ ಅದಕ್ಕೂ ಹೆಚ್ಚು ವೆಚ್ಚವನ್ನೊಳಗೊಳ್ಳುವ ಯಾವ ಕರಾರನ್ನು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೇ ಮಾಡಿಕೊಳ್ಳತಕ್ಕದ್ದಲ್ಲ.

(ಬಿ) ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮತ್ತು ಈ ಸಂಬಂಧವಾಗಿ ನಿಯಮಿಸಬಹುದಾದಂತಹ ಷರತ್ತಿಗೊಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ ಕಾಲಕಾಲಕ್ಕೆ ಅಗತ್ಯವಾಗುವ ಯಾವುದೇ ಮೊಬಲಗನ್ನು ಸಾಲವಾಗಿ ಪಡೆಯಲು ಅಧಿಕಾರವನ್ನು ಹೊಂದಿರತಕ್ಕದ್ದು;

(ಸಿ) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ಮುಕ್ತ ಸ್ಥಳಗಳನ್ನು ರೂಪಿಸುವುದಕ್ಕಾಗಿ ಅಥವಾ ಕಟ್ಟಡ ನಿರ್ಮಿಸುವುದಕ್ಕಾಗಿ ಅಥವಾ ಅಭಿವೃದ್ಧಿ ಯೋಜನೆಯ ಯಾವುದೇ ಇತರ ರೀತಿಯ ಉದ್ದೇಶಕ್ಕಾಗಿ, 41ನೇ ಪ್ರಕರಣಕ್ಕೆ ಮತ್ತು ನಿಯಮಿಸಬಹುದಾದ ಅಂಥ ನಿರ್ಬಂಧಗಳು, ಷರತ್ತುಗಳು ಮತ್ತು ಮಿತಿಗಳಿಗೆ ಒಳಪಟ್ಟು ಅದಕ್ಕೆ ಸೇರಿರುವ ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಗುತ್ತಿಗೆ ನೀಡುವುದು, ಮಾರಾಟ ಮಾಡುವುದು ಅಥವಾ ಅನ್ಯಥಾ ವರ್ಗಾಯಿಸುವುದು ಮತ್ತು ತನ್ನಲ್ಲಿ ವಿಹಿತವಾಗಿರುವ ಅಥವಾ ಸ್ವಾಧೀನಪಡಿಸಿಕೊಂಡಿರುವ ಯಾವುದೇ ಭೂಪ್ರದೇಶವನ್ನು ವಿನಿಯೋಗಿಸುವುದು ಅಥವಾ ಉಪಯೋಗಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**9. ಪ್ರಾಧಿಕಾರದ ಉಪ ಸಮಿತಿಗಳು.**– (1) ಪ್ರಾಧಿಕಾರವು, ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ, ಆಯುಕ್ತನು ಅಧ್ಯಕ್ಷನಾಗಿರುವ ಮತ್ತು ಪ್ರತಿಯೊಂದು ಉಪಸಮಿತಿಗೆ ಐದು ಜನರಿಗೆ ಮೀರದಂಥ ಇತರ ಸದಸ್ಯರಿರುವ ಒಂದು ಅಥವಾ ಹೆಚ್ಚು ಉಪಸಮಿತಿಗಳನ್ನು ರಚಿಸಬಹುದು.

(2) ಉಪಸಮಿತಿಗಳು ಪ್ರಾಧಿಕಾರವು ಪ್ರತ್ಯಾಯೋಜಿಸಿದಂತಹ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(3) ಪ್ರತಿಯೊಂದು ಉಪಸಮಿತಿಯು ಕನಿಷ್ಠ ಪಕ್ಷ ತಿಂಗಳಿಗೆ ಒಂದು ಸಲವಾದರೂ ಸಭೆ ಸೇರತಕ್ಕದ್ದು ಮತ್ತು ಅದರ ಸಭೆಯ ಕಾರ್ಯಕಲಾಪಗಳಿಗೆ ಸಂಬಂಧಿಸಿದಂತೆ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದ ಅಂತಹ ಪ್ರಕ್ರಿಯೆಯನ್ನು ಪಾಲಿಸತಕ್ಕದ್ದು.

**10. ಆಯುಕ್ತನ ನೇಮಕಾತಿ.**- (1) ಸರ್ಕಾರವು, ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಪ್ರಾಧಿಕಾರದ ಆಯುಕ್ತನನ್ನಾಗಿ ನೇಮಿಸತಕ್ಕದ್ದು.

(2) ಆಯುಕ್ತನು, ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು ಮತ್ತು ಆಯುಕ್ತನ ಸೇವಾ ಷರತ್ತುಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಂತ್ರಿಸತಕ್ಕದ್ದು.

(3) ರಾಜ್ಯ ಸರ್ಕಾರವು, ತಾನು ಯುಕ್ತವೆಂದು ಭಾವಿಸುವಂಥ ಅವಧಿಗೆ ಆಯುಕ್ತನಿಗೆ ಗೈರು ಹಾಜರಾಗಲು ಅನುಮತಿಯನ್ನು ನೀಡಬಹುದು.

**11. ಆಯುಕ್ತನ ಅಧಿಕಾರಗಳು ಮತ್ತು ಕರ್ತವ್ಯಗಳು.-** (1) ಆಯುಕ್ತನು, ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣ ಮತ್ತು ಆಡಳಿತಾಧಿಕಾರಿಯಾಗಿರತಕ್ಕದ್ದು.

(2) ಆಯುಕ್ತನು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ತನಗೆ ಪ್ರದತ್ತವಾಗಿರುವಂತಹ ಪ್ರಕಾರ್ಯಗಳನ್ನು ನೆರವೇರಿಸುವುದರ ಜೊತೆಗೆ,-

(ಎ) ಪ್ರಾಧಿಕಾರದ ಗೊತ್ತುವಳಿಗಳನ್ನು ಜಾರಿಗೊಳಿಸತಕ್ಕದ್ದು;

(ಬಿ) ಪ್ರಾಧಿಕಾರದ ವ್ಯವಹಾರವನ್ನು ನಡೆಸುವುದು ಮತ್ತು ಪತ್ರ ವ್ಯವಹಾರವನ್ನು ನಡೆಸುವುದು;

(ಸಿ) ಸರ್ಕಾರವು ನಿರ್ದೇಶಿಸಬಹುದಾದಂಥ ಯೋಜನೆಗಳನ್ನು ಕಾರ್ಯಗತಗೊಳಿಸುವುದು ಮತ್ತು ಕಾಮಗಾರಿಗಳನ್ನು ನಿರ್ವಹಿಸುವುದು ಹಾಗೂ ಅದಕ್ಕಾಗಿ ಅವಶ್ಯ ವೆಚ್ಚವನ್ನು ಮಾಡುವುದು ;

(ಡಿ) ಪ್ರಾಧಿಕಾರದ ಯೋಜನೆಗಳ ಅನುಷ್ಠಾನಕ್ಕೆ ಜವಾಬ್ದಾರರಾಗಿರತಕ್ಕದ್ದು;

(ಇ) ಪ್ರಾಧಿಕಾರದ ಬ್ಯಾಂಕ್ ಖಾತೆಗಳಲ್ಲಿ ವ್ಯವಹಾರ ನಡೆಸತಕ್ಕದ್ದು ಮತ್ತು ಪ್ರಾಧಿಕಾರದ ಲೆಕ್ಕಪತ್ರಗಳನ್ನು ನಿರ್ವಹಿಸಲು ಜವಾಬ್ದಾರರಾಗಿರತಕ್ಕದ್ದು;

(ಎಫ್) ಪ್ರಾಧಿಕಾರದ ಅಧಿಕಾರಿಗಳು ಮತ್ತು ನೌಕರರ ಮೇಲೆ ಕಾರ್ಯನಿರ್ವಹಣೆಗೆ, ಆಡಳಿತ ವಿಷಯಗಳು ಮತ್ತು ಅಂತಹ ಅಧಿಕಾರಿಗಳು ಮತ್ತು ನೌಕರರ ಸೇವಾ ವಿಷಯಗಳು ಹಾಗೂ ಅವರ ವೇತನ ಮತ್ತು ಭತ್ಯೆಗಳನ್ನು ವಿನಿಯಮನಗೊಳಿಸುವ ಬಗ್ಗೆ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು ಹಾಗೂ ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಜಿ) ಪ್ರಾಧಿಕಾರದ ಸಂಕ್ಷಿಪ್ತ ಟಿಪ್ಪಣಿಗಳ ಮತ್ತು ಯಾವುದೇ ವಿವರ ಪತ್ರದ ಪ್ರತಿಯನ್ನು ಅಥವಾ ಸರ್ಕಾರವು ಕಾಲಕಾಲಕ್ಕೆ ಕೋರಬಹುದಾದ ಇತರ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು;

(ಎಚ್) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ಆತನಿಗೆ ಪ್ರದತ್ತವಾದ ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**12. ಪ್ರಾಧಿಕಾರದ ನೌಕರರು.-**(1) ನಿಯಮಿಸಬಹುದಾದಂತಹ ನಿಯಮಗಳಿಗೊಳಪಟ್ಟು ಪ್ರಾಧಿಕಾರವು, ಅಧಿನಿಯಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಅದು ಅವಶ್ಯವೆಂದು ಭಾವಿಸುವಂತಹ ಸಂಖ್ಯೆಯ ನೌಕರರನ್ನು ನೇಮಕ ಮಾಡಿಕೊಳ್ಳಬಹುದು:

ಪರಂತು, ಸರ್ಕಾರವು ಭಾರತೀಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರಗಳ ಸೇವೆಯಿಂದಾಗಲಿ ಅಥವಾ ಕರ್ನಾಟಕ ರಾಜ್ಯ ಲೆಕ್ಕಪತ್ರಗಳ ಸೇವೆಯಿಂದಾಗಲಿ ಗ್ರೂಪ್ "ಎ" ಕಿರಿಯಶ್ರೇಣಿ ಅಧಿಕಾರಿಯ ದರ್ಜೆಗೆ ಕಡಿಮೆ ಇಲ್ಲದ ದರ್ಜೆಯ ಅಧಿಕಾರಿಯನ್ನು ನಿಯೋಜನೆಯ ಮೇಲೆ ಹಣಕಾಸು ಮತ್ತು ಲೆಕ್ಕಪತ್ರದ ನಿಯಂತ್ರಣಾಧಿಕಾರಿಯನ್ನಾಗಿ ನೇಮಕ ಮಾಡತಕ್ಕದ್ದು.

(2) ಹಣಕಾಸು ಮತ್ತು ಲೆಕ್ಕಪತ್ರ ನಿಯಂತ್ರಣಾಧಿಕಾರಿಯು ಆಯುಕ್ತನಲ್ಲಿ ವರದಿ ಮಾಡಿಕೊಳ್ಳತಕ್ಕದ್ದು ಮತ್ತು ಪ್ರಾಧಿಕಾರದ ಹಣಕಾಸು ವ್ಯವಹಾರಗಳ ಬಗ್ಗೆ ವಾಸ್ತವಿಕವಾದ ಹಾಗೂ ನ್ಯಾಯಯುತವಾದ ಚಿತ್ರಣವನ್ನು ನೀಡುವ ಮೂಲಕ ಹಣಕಾಸು ನಿಯಮಗಳನ್ನು ಪಾಲಿಸಲಾಗುತ್ತಿದೆ ಮತ್ತು ಲೆಕ್ಕಪತ್ರಗಳನ್ನು ಅಂದಂದಿನವರೆಗೆ ನಿರ್ವಹಿಸಲಾಗುತ್ತಿದೆಯೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(3) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೌಕರರ ವೇತನಗಳು, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಾಧಿಕಾರದ ನೌಕರರಿಗೆ ಸಂಬಂಧಿಸಿದಂತೆ ಆಯುಕ್ತನು ನೇಮಕಾತಿ ಅಧಿಕಾರಿಯಾಗಿರತಕ್ಕದ್ದು ಮತ್ತು ಪ್ರಾಧಿಕಾರದ ಸಿಬ್ಬಂದಿಯ ಮೇಲೆ ಸಾಮಾನ್ಯ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ಮೇಲ್ವಿಚಾರಣೆಯನ್ನು ಮಾಡತಕ್ಕದ್ದು.

**13. ಪ್ರಾಧಿಕಾರದ ಅಡಿಯಲ್ಲಿನ ಸೇವೆಗಳಿಗಾಗಿ ಸಾಮಾನ್ಯ ಅನರ್ಹತೆಗಳು.-** ಯಾವ ವ್ಯಕ್ತಿಯೂ, ಪ್ರಾಧಿಕಾರದ ಅಧಿಕಾರಿ ಅಥವಾ ನೌಕರನಾಗಿ ಅಲ್ಲದೆ, ಖುದ್ದಾಗಿ ಅಥವಾ ತನ್ನ ಪಾಲುದಾರನ ಮೂಲಕ ಅಥವಾ ತನ್ನ ಏಜಂಟನ ಮೂಲಕ ಪ್ರಾಧಿಕಾರದ ಯಾವುದೇ ಷೇರನ್ನು ಹೊಂದಿದ್ದರೆ ಅಥವಾ ಪ್ರಾಧಿಕಾರವು ಮಾಡಿಕೊಂಡ ಇಲ್ಲವೇ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ಪ್ರಾಧಿಕಾರದ ಅಡಿಯಲ್ಲಿನ ಯಾವುದೇ ನಿಯೋಜನೆಯಲ್ಲಿ ಹಿತಾಸಕ್ತಿಯನ್ನು ಹೊಂದಿದ್ದರೆ ಆತನು ಪ್ರಾಧಿಕಾರದ ಅಧಿಕಾರಿ ಅಥವಾ ಉದ್ಯೋಗಿಯಾಗತಕ್ಕದ್ದಲ್ಲ ಅಥವಾ ಆಗಿರತಕ್ಕದ್ದಲ್ಲ.

**14. ಪ್ರಾಧಿಕಾರದ ಸಭೆಗಳು.-** (1) ಪ್ರಾಧಿಕಾರದ ಆಯುಕ್ತರು, ಪ್ರಾಧಿಕಾರದ ಅಧ್ಯಕ್ಷರ ಪೂರ್ವಾನುಮತಿಯೊಂದಿಗೆ ಮತ್ತು ಅಧ್ಯಕ್ಷರು ಯುಕ್ತವೆಂದು ಭಾವಿಸಬಹುದಾದಂತಹ ಅವಧಿಗಳ ಅಂತರದಲ್ಲಿ ಮತ್ತು ಅಧ್ಯಕ್ಷರು ನಿರ್ಧರಿಸಬಹುದಾದಂತಹ ಸ್ಥಳದಲ್ಲಿ ಪ್ರಾಧಿಕಾರದ ಸಭೆಗಳನ್ನು ನಡೆಸತಕ್ಕದ್ದು:

ಪರಂತು, ಪ್ರಾಧಿಕಾರವು ಒಂದು ಕ್ಯಾಲೆಂಡರ್ ವರ್ಷದಲ್ಲಿ ಕನಿಷ್ಠ ಎರಡು ಬಾರಿಯಾದರೂ ಸಭೆ ಸೇರತಕ್ಕದ್ದು.

(2) ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಅಧ್ಯಕ್ಷನು ವಹಿಸತಕ್ಕದ್ದು ಮತ್ತು ಯಾವುದೇ ಕಾರಣದಿಂದಾಗಿ ಅಧ್ಯಕ್ಷನಿಗೆ ಯಾವುದೇ ಸಭೆಗೆ ಹಾಜರಾಗಲು ಸಾಧ್ಯವಾಗದಿದ್ದರೆ, ಸಹ ಅಧ್ಯಕ್ಷನು ಮತ್ತು ಆತನ ಗೈರು ಹಾಜರಿಯಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರ ಪೈಕಿ ಆಯ್ಕೆ ಮಾಡಲಾಗುವ ಯಾವೊಬ್ಬ ಇತರ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಪ್ರಾಧಿಕಾರದ ತೀರ್ಮಾನಗಳನ್ನು ಹಾಜರಿದ್ದು ಮತ ಹಾಕುವ ಸದಸ್ಯರ ಸರ್ವಾನುಮತದ ಸಮ್ಮತಿ ಸೂಚನೆಯ ಮೂಲಕ ಕೈಗೊಳ್ಳತಕ್ಕದ್ದು. ಪ್ರಾಧಿಕಾರದ ಮುಂದೆ ತೀರ್ಮಾನಕ್ಕಾಗಿ ಬಂದ ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳಿದ್ದಲ್ಲಿ, ಆಯುಕ್ತನು ಆ ವಿಷಯವನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಬಗ್ಗೆ ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

(4) ಆಯುಕ್ತರು, ಪ್ರಾಧಿಕಾರದ ತೀರ್ಮಾನಗಳನ್ನು ಕಾರ್ಯಗತಗೊಳಿಸತಕ್ಕದ್ದು:

ಪರಂತು, ಪ್ರಾಧಿಕಾರವು ಕೈಗೊಂಡ ನಿರ್ಣಯವು ಈ ಅಧಿನಿಯಮದ ಅಥವಾ ಇತರ ಕಾನೂನಿನ ಉಪಬಂಧವನ್ನು ಅಥವಾ ಈ ಅಧಿನಿಯಮದ ಅಥವಾ ಇತರ ಯಾವುದೇ ಕಾನೂನಿನ ಅಡಿಯಲ್ಲಿ ರಚಿಸಲಾದ ಅಥವಾ ಹೊರಡಿಸಿದ ಯಾವುದೇ ನಿಯಮ ಅಥವಾ ಅಧಿಸೂಚನೆ ಅಥವಾ ವಿನಿಯಮಗಳ ಉಪಬಂಧವನ್ನು ಅಥವಾ ಸರ್ಕಾರವು ಹೊರಡಿಸಿದ ಯಾವುದೇ ಆದೇಶವನ್ನು ಉಲ್ಲಂಘಿಸುತ್ತದೆಯೆಂದು ಅಥವಾ ಪ್ರಾಧಿಕಾರದ ಹಿತಾಸಕ್ತಿಗೆ ಅಥವಾ ಸಂಗೊಳ್ಳಿ ರಾಯಣ್ಣ ಕ್ಷೇತ್ರದ ಅಭಿವೃದ್ಧಿ ಮತ್ತು ನಿರ್ವಹಣೆಗೆ ಧಕ್ಕೆ ಉಂಟುಮಾಡುತ್ತದೆ ಅಥವಾ ಹಾನಿಕಾರಕವಾಗುತ್ತದೆಯೆಂದು ಆಯುಕ್ತರು ಭಾವಿಸಿದರೆ, ಅವರು ನಿರ್ಣಯವನ್ನು ಅನುಮೋದಿಸಲಾದ ಹದಿನೈದು ದಿನಗಳ ಒಳಗಾಗಿ ವಿಷಯದ ಬಗ್ಗೆ ಆದೇಶಗಳನ್ನು ಕೋರಿ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಪ್ರಾಧಿಕಾರದ ಮುಂದಿನ ಸಭೆಯಲ್ಲಿ ತಾನು ಕೈಗೊಂಡ ಕ್ರಮದ ಬಗ್ಗೆ ತಿಳಿಸತಕ್ಕದ್ದು ಮತ್ತು ಆಯುಕ್ತನು ಕಳುಹಿಸಿಕೊಟ್ಟ ಅಂತಹ ವಿಷಯದ ಬಗ್ಗೆ ಸರ್ಕಾರವು ಆದೇಶವನ್ನು ನೀಡುವವರೆಗೆ ಆಯುಕ್ತನು ಆ ನಿರ್ಣಯವನ್ನು ಜಾರಿಗೆ ತರಲು ಬದ್ಧನಾಗಿರತಕ್ಕದ್ದಲ್ಲ.

(5) ಪ್ರಾಧಿಕಾರವು ವಿನಿಮಯಗಳ ಮೂಲಕ ತನ್ನ ಸಭೆಗಳ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ನಿಯಮಗಳಿಗೆ ಅಸಂಗತವಾಗದಂತಹ, ಕಾರ್ಯವಿಧಾನಗಳನ್ನು ನಿರ್ದಿಷ್ಟಪಡಿಸಬಹುದು.

**15. ವ್ಯವಹರಣೆಗಳು ಸರಿಯಾದುದೆಂದು ಮತ್ತು ಊರ್ಜಿತವಾದುದೆಂದು ಪೂರ್ವಭಾವನೆ ಮಾಡುವುದು.-** ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿಯ ಅನರ್ಹತೆ ಅಥವಾ ನೇಮಕಾತಿಯಲ್ಲಿನ ನ್ಯೂನತೆಯು ಪ್ರಾಧಿಕಾರದ ಯಾವುದೇ ಕೃತ್ಯ ಅಥವಾ ನಡವಳಿಯು ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿದ್ದರೆ ಅಂತಹ ಕೃತ್ಯ ಅಥವಾ ವ್ಯವಹರಣೆಯನ್ನು ದೂಷಿತಗೊಳಿಸುತ್ತದೆಂದು ಭಾವಿಸತಕ್ಕದ್ದಲ್ಲ.

**16. ಟಿಪ್ಪಣಿಯನ್ನು ಪರಿಚಲಿಸುವ ಮೂಲಕ ಪ್ರಾಧಿಕಾರದ ತೀರ್ಮಾನಗಳು.-** (1) ಅಧ್ಯಕ್ಷರು ಯಾವುದೇ ಪ್ರಕರಣವನ್ನು ಪ್ರಾಧಿಕಾರದ ಒಂದು ಸಭೆಯಲ್ಲಿ ಚರ್ಚೆಗೆ ಬದಲಾಗಿ ಆ ಬಗ್ಗೆ ಸದಸ್ಯರ ಅಭಿಪ್ರಾಯವನ್ನು ಕೋರಿ ನಿಯಮಿಸಲಾದ ನಮೂನೆಯಲ್ಲಿ ಒಂದು ಟಿಪ್ಪಣಿಯನ್ನು ಪ್ರಾಧಿಕಾರದ ಸದಸ್ಯರ ನಡುವೆ ಪರಿಚಲನೆ ಮಾಡಿಸಲು ನಿರ್ದೇಶಿಸಬಹುದು. ಹಾಗೆ ಪರಿಚಲನೆ ಮಾಡಲಾದ ಟಿಪ್ಪಣಿಯಲ್ಲಿರುವ ಪ್ರಸ್ತಾವವನ್ನು ಎಲ್ಲಾ ಸದಸ್ಯರು

ಸರ್ವಾನುಮತದಿಂದ ಒಪ್ಪಿಕೊಂಡಲ್ಲಿ ಅದನ್ನು ಪ್ರಾಧಿಕಾರದ ಸಮ್ಮತಿಸೂಚಕ ನಿರ್ಣಯವೆಂಬುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಮುಂದಿನ ಕ್ರಮವನ್ನು ಕೈಗೊಳ್ಳತಕ್ಕದ್ದು. ಪ್ರಾಧಿಕಾರದ ತೀರ್ಮಾನಕ್ಕಾಗಿ ಪರಿಚಲನೆ ಮಾಡಲಾದ ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ವ್ಯಕ್ತವಾದರೆ, ಆಯುಕ್ತರು ಆ ವಿಷಯವನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಆ ಬಗ್ಗೆ ಸರ್ಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಅಭಿಪ್ರಾಯಕ್ಕಾಗಿ ಪರಿಚಲನೆ ಮಾಡಲಾದ ಸಂದರ್ಭಗಳಲ್ಲಿ, ಯಾವೊಬ್ಬ ಸದಸ್ಯನು ಟಿಪ್ಪಣಿಯಲ್ಲಿ ನಿರ್ದಿಷ್ಟ ಪಡಿಸಿರುವ ದಿನಾಂಕದೊಳಗೆ ತಮ್ಮ ಅಭಿಪ್ರಾಯವನ್ನು ತಿಳಿಸಲು ತಪ್ಪಿದರೆ, ಸುತ್ತೋಲೆಯಲ್ಲಿ ಕಳುಹಿಸಿದ ಟಿಪ್ಪಣಿಯಲ್ಲಿ ಒಳಗೊಂಡ ಪ್ರಸ್ತಾವವನ್ನು ಅಂತಹ ಸದಸ್ಯರು ಒಪ್ಪಿಕೊಂಡಿದ್ದಾರೆಂದು ಭಾವಿಸತಕ್ಕದ್ದು.

(3) 14ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಈ ಪ್ರಕರಣದ ಅಡಿಯಲ್ಲಿ ಪರಿಚಲನೆ ಮೂಲಕ ಕೈಗೊಂಡ ಪ್ರಾಧಿಕಾರದ ತೀರ್ಮಾನಗಳಿಗೆ ಅನ್ವಯವಾಗತಕ್ಕದ್ದು.

**17. ಕೆಲವು ತೀರ್ಮಾನಗಳನ್ನು ಕೈಗೊಳ್ಳಲು ಅಧ್ಯಕ್ಷರ ಅಧಿಕಾರ.**-(1) ಯಾವೊಂದು ವಿಷಯವು 14ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರದ ಸಭೆಯನ್ನು ಕರೆಯಲು ಅಗತ್ಯಪಡಿಸುವಷ್ಟು ಅಥವಾ 16ನೇ ಪ್ರಕರಣದ ಅಡಿಯಲ್ಲಿ ಪರಿಚಲನೆಯ ಮೂಲಕ ಪ್ರಾಧಿಕಾರವು ತೀರ್ಮಾನಿಸುವವರೆಗೂ ಕಾಯಲು ಸಾಧ್ಯವಾಗದಷ್ಟು ತುರ್ತು ಸ್ವರೂಪದ್ದಾಗಿದೆಯೆಂದು ಅಥವಾ ವಿಷಯವು ಗಹನವಾದುದಲ್ಲವೆಂದು ಅಧ್ಯಕ್ಷರು ಅಭಿಪ್ರಾಯಪಟ್ಟಲ್ಲಿ, ಅವರು ತಾವು ಯುಕ್ತವೆಂದು ಭಾವಿಸುವಂತಹ ಆದೇಶಗಳನ್ನು ನೀಡಬಹುದು ಮತ್ತು ಅದನ್ನು ಪ್ರಾಧಿಕಾರದ ತೀರ್ಮಾನಗಳ ರೀತಿಯಲ್ಲಿಯೇ ಅನುಷ್ಠಾನಗೊಳಿಸತಕ್ಕದ್ದು:

ಪರಂತು, ಅಧ್ಯಕ್ಷರು ಈ ಪ್ರಕರಣದ ಅಡಿಯಲ್ಲಿ ಕೈಗೊಂಡ ಪ್ರತಿಯೊಂದು ತೀರ್ಮಾನಗಳನ್ನು ಪ್ರಾಧಿಕಾರದ ಮುಂದಿನ ಸಭೆಯಲ್ಲಿ ಮಂಡಿಸತಕ್ಕದ್ದು.

## ಅಧ್ಯಾಯ III

## ಸಂಗೊಳ್ಳಿ ರಾಯಣ್ಣ ಕ್ಷೇತ್ರದ ಅಭಿವೃದ್ಧಿ ಹಾಗೂ ನಿರ್ವಹಣೆ

**18. ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿಯ ಪಾರಂಪರಿಕ ತಾಣಗಳು ಪ್ರಾಧಿಕಾರದಲ್ಲಿ ನಿಹಿತವಾಗುವುದು.**- (1) ಯಾವುದೇ ಪದ್ಧತಿ, ಸಂಪ್ರದಾಯ, ರೂಢಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸೃಜಿಸಲಾದ ಮತ್ತು ಅಸ್ತಿತ್ವದಲ್ಲಿರುವ ಯಾವುದೇ

ನ್ಯಾಸದ ನಿಬಂಧನೆಗಳಲ್ಲಿ ಏನೇ ಇದ್ದರೂ, ಪಾರಂಪರಿಕ ತಾಣಗಳೆಂದು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಎಲ್ಲಾ ಅಥವಾ ಯಾವುವೇ ಪಾರಂಪರಿಕ ತಾಣಗಳ ಸಂಪೂರ್ಣ ನಿಯಂತ್ರಣ, ನಿರ್ವಹಣೆ ಮತ್ತು ಮೇಲ್ವಿಚಾರಣೆಯು, ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು ಮತ್ತು ತದನಂತರ ಸರ್ಕಾರವು ಅಧಿಸೂಚಿಸಿದ ದಿನಾಂಕದಿಂದ ಇದು ಪ್ರಾಧಿಕಾರಕ್ಕೆ ವರ್ಗಾವಣೆಯಾಗತಕ್ಕದ್ದು.

(2) ಸರ್ಕಾರವು, ತಾತ್ಕಾಲಿಕ ಉಪಬಂಧಗಳನ್ನು ಕಲ್ಪಿಸುವುದು ಅವಶ್ಯವೆಂದು ಭಾವಿಸಿದರೆ, ಅದು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಹಾಗೆ ಮಾಡಬಹುದು.

**19. ಅನುಸೂಚಿಯನ್ನು ತಿದ್ದುಪಡಿ ಮಾಡುವ ಅಧಿಕಾರ.**– ಸರ್ಕಾರವು ನಿಯಮಿಸಬಹುದಾದಂಥ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ಅಧಿಸೂಚನೆಯ ಮೂಲಕ ಅನುಸೂಚಿಯಲ್ಲಿ ಯಾವುದೇ ನಮೂದನ್ನು ಸೇರಿಸಿ ಅಥವಾ ಮಾರ್ಪಡಿಸಿ ಅದನ್ನು ತಿದ್ದುಪಡಿ ಮಾಡಬಹುದು.

**20. ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು, ಅದರ ಅನುಮೋದನೆ ಹಾಗೂ ಅದನ್ನು ಕಾರ್ಯಗತಗೊಳಿಸುವುದು.**- (1) ಪ್ರಾಧಿಕಾರವು, ಅದರ ರಚನೆಯಾದ ಮೇಲೆ, ಆದಷ್ಟು ಬೇಗನೆ ಸಂಗೊಳ್ಳಿ ರಾಯಣ್ಣ ಕ್ಷೇತ್ರವನ್ನು ಅಂತರ-ರಾಷ್ಟ್ರೀಯ ಪಾರಂಪರಿಕ ತಾಣವಾಗಿ, ಸಾಂಸ್ಕೃತಿಕ ಹಾಗೂ ಪ್ರವಾಸಿ ಕೇಂದ್ರವನ್ನಾಗಿ ಮತ್ತು ಶ್ರೀ ಸಂಗೊಳ್ಳಿ ರಾಯಣ್ಣ ಮತ್ತು ಆತನ ಸಮಕಾಲೀನರ ಕುರಿತು ಚರ್ಚೆ ಹಾಗೂ ಪ್ರಚಾರದ ಕೇಂದ್ರವನ್ನಾಗಿ ಮಾಡಿ ಅದನ್ನು ಅಭಿವೃದ್ಧಿಗೊಳಿಸಲು ಯೋಜನೆಯನ್ನು ಸಿದ್ಧಪಡಿಸತಕ್ಕದ್ದು. ಅಭಿವೃದ್ಧಿ ಯೋಜನೆಯು ಈ ಮುಂದಿನವುಗಳನ್ನು ಒಳಗೊಂಡಿರಬಹುದು, ಎಂದರೆ:-

(ಎ) ಯಾವುದೇ ಪಾರಂಪರಿಕ ತಾಣ ಅಥವಾ ರಚನೆಯ ಪುನರ್ ನಿರ್ಮಾಣ ಹಾಗೂ ಅದರ ನಿರ್ವಹಣೆಗಾಗಿ ಕಾರ್ಯಕ್ರಮಗಳು;

(ಬಿ) ಪ್ರಾಧಿಕಾರದ ಅಭಿಪ್ರಾಯದಲ್ಲಿ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯವಾದ ಭೂಮಿಯನ್ನು ಆರ್ಜನೆ ಅಥವಾ ಖರೀದಿಯ ಮೂಲಕ, ವಿನಿಮಯ ಅಥವಾ ಅನ್ಯಥಾ ಆರ್ಜಿಸುವುದಕ್ಕಾಗಿ ಪ್ರಸ್ತಾವಗಳು;

(ಸಿ) ಸಾರ್ವಜನಿಕ ಉದ್ಯಾನವನಗಳು, ತೋಟಗಾರಿಕೆ ಅಥವಾ ಮೃಗಾಲಯಗಳು, ಚಿಲುಮೆಗಳಿರುವ ವನಗಳು, ಕೃತಕ ಜಲಪಾತಗಳು, ಆಟದ ಉದ್ಯಾನವನಗಳು, ದೋಣಿ ವಿಹಾರದ ಅಥವಾ ನೀರಿನ ಇತರ ಕ್ರೀಡೆಯ ಸೌಲಭ್ಯವಿರುವ ಸರೋವರಗಳನ್ನು ಅಥವಾ ಪ್ರವಾಸಿಗಳಿಗೆ ಆಕರ್ಷಣೆಯನ್ನುಂಟುಮಾಡುವಂಥ ಇತರ ಕೇಂದ್ರಗಳನ್ನು ನಿರ್ಮಿಸುವುದು;

(ಡಿ) ಛತ್ರಗಳು, ವಸತಿ-ಗೃಹಗಳು, ಕಾಟೇಜುಗಳು, ಹೋಟೆಲುಗಳು, ರೆಸ್ಟೋರೆಂಟು ಮತ್ತು ಬೇರೆ ಬೇರೆ ವರ್ಗದ ಪ್ರವಾಸಿಗರಿಗೆ ಆಹಾರ ಒದಗಿಸುವುದಕ್ಕಾಗಿ ಪ್ರಾಧಿಕಾರ ಭೋಜನಾಲಯಗಳನ್ನು ನಿರ್ಮಿಸುವುದು;

(ಇ) ಅವಶ್ಯಕ ಅಂಗಡಿಗಳ ಸಾಲುಗಳನ್ನು ಅಥವಾ ಅಂಗಡಿ-ಸಂಕೀರ್ಣಗಳನ್ನು ನಿರ್ಮಿಸುವುದು;

(ಎಫ್) ಸಭಾಂಗಣ ಅಥವಾ ಸ್ಮಾರಕ ಭವನವನ್ನು ನಿರ್ಮಿಸುವುದು;

(ಜಿ) ಆಯಕಟ್ಟಿನ ಸ್ಥಳಗಳಲ್ಲಿ ಪ್ರದರ್ಶನ ಮಂದಿರಗಳು ಮತ್ತು ಐತಿಹಾಸಿಕ ಪ್ರಸರಣ ಮಂದಿರಗಳನ್ನು ನಿರ್ಮಿಸುವುದು;

(ಹೆಚ್) 2ನೇ ಪ್ರಕರಣದ (ಎ) ಖಂಡದಲ್ಲಿ ಪರಿಭಾಷಿಸಲಾದಂತೆ ಸೌಕರ್ಯಗಳನ್ನು ಕಲ್ಪಿಸುವುದು;

(ಐ) ಕಟ್ಟಡಗಳ ನಿರ್ಮಾಣ ಹಾಗೂ ಪುನರ್-ನಿರ್ಮಾಣವೂ ಸೇರಿದಂತೆ ಎಲ್ಲಾ ಅಥವಾ ಯಾವುದೇ ಭೂಮಿಯ ವಿನ್ಯಾಸ ಮತ್ತು ಮರು ವಿನ್ಯಾಸ;

(ಜೆ) ಚರಂಡಿ ವ್ಯವಸ್ಥೆ, ವಿದ್ಯುಚ್ಛಕ್ತಿ ಮತ್ತು ನೀರು ಪೂರೈಕೆ ಹಾಗೂ ನೈರ್ಮಲ್ಯ ವ್ಯವಸ್ಥೆಯ ಏರ್ಪಾಡು;

(ಕೆ) ಪ್ರಾಧಿಕಾರವು, ಸಾಧಾರಣವಾಗಿ ತನ್ನ ಯೋಜನಾ ಕಾರ್ಯಕ್ಕೆ ಅನುವಾಗುವಂತೆ ಮತ್ತು ಮುಖ್ಯವಾಗಿ ಉತ್ತಮ ಚರಂಡಿ ವ್ಯವಸ್ಥೆಯನ್ನು ಒದಗಿಸಲು, ಯಾವುದೇ ಭೂಮಿಯನ್ನು ಎತ್ತರಿಸುವುದು ಸೂಕ್ತವೆಂದು ಭಾವಿಸಿದರೆ ಅಂಥ ಭೂಮಿಯನ್ನು ಎತ್ತರಿಸುವುದು;

(ಎಲ್) ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿ  ಅಥವಾ ಅದಕ್ಕೆ ಲಗತ್ತಾಗಿರುವ ಪ್ರದೇಶದಲ್ಲಿ ಉತ್ತಮ ಗಾಳಿ-ಬೆಳಕಿನ ವ್ಯವಸ್ಥೆಗಾಗಿ ಖಾಲಿ ಜಾಗಗಳನ್ನು ಬಿಡುವುದು;

(ಎಂ) ಜನರ ವಾಸಕ್ಕೆ ಯೋಗ್ಯವಲ್ಲದ ಹಾಗೂ ಅಭಿವೃದ್ಧಿ ಯೋಜನೆಗೆ ತಕ್ಕುದಲ್ಲದ ಎಲ್ಲ ಕಟ್ಟಡಗಳನ್ನು ಕೆಡಹುವುದು;

(ಎನ್) ಅಡಚಣೆಯನ್ನುಂಟುಮಾಡುವ ಕಟ್ಟಡಗಳನ್ನು ಅಥವಾ ಕಟ್ಟಡಗಳ ಭಾಗಗಳನ್ನು ಕೆಡಹುವುದು;

(ಒ) ಕಟ್ಟಡಗಳ ನಿರ್ಮಾಣ ಮತ್ತು ಪುನರ್‌ನಿರ್ಮಾಣ, ಅವುಗಳ ನಿರ್ವಹಣೆ ಮತ್ತು ಸಂರಕ್ಷಣೆ;

(ಪಿ) 36ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಯೋಜನೆಯಲ್ಲಿ ಒಳಗೊಂಡ ಯಾವುದೇ ಸ್ವತ್ತನ್ನು ಮಾರಾಟ ಮಾಡುವುದು, ಬಾಡಿಗೆ ನೀಡುವುದು ಅಥವಾ ವಿನಿಮಯ ಮಾಡುವುದು ;

(ಕ್ಯೂ) ಪ್ರಾಧಿಕಾರದ ಸಿಬ್ಬಂದಿಗೆ ಸ್ಥಳಾವಕಾಶವನ್ನು ಕಲ್ಪಿಸುವುದು ;

(ಆರ್) ಸಂಪರ್ಕ ಮತ್ತು ಸಾಗಣೆ ಸೌಲಭ್ಯಗಳಿಗಾಗಿ ಏರ್ಪಾಟನ್ನು ಮಾಡುವುದು;

(ಎಸ್) ಅಭಿವೃದ್ಧಿ ಯೋಜನೆಯ ಸ್ಕೀಮಿನೊಳಗೆ ಹಾಗೆ ಮುಂದುವರೆಯುವಂತೆ ಅನುಮತಿಸಬಹುದಾದ ಅಭಿವೃದ್ಧಿ ಯೋಜನೆಯಲ್ಲಿ ಅಸ್ತಿತ್ವದಲ್ಲಿರುವ ಧಾರ್ಮಿಕ ಸಂಸ್ಥೆಗಳೊಂದಿಗೆ ಅಂಥ ಹೊಂದಾಣಿಕೆಗಳು ಮತ್ತು ಒಪ್ಪಂದಗಳು;

(ಟಿ) ಸಂಗೊಳ್ಳಿ ರಾಯಣ್ಣ ಕ್ಷೇತ್ರವನ್ನು ಸಾಂಸ್ಕೃತಿಕ ಕೇಂದ್ರ, ಪಾರಂಪರಿಕ ಸ್ಥಳ ಮತ್ತು ಅಂತರ-ರಾಷ್ಟ್ರೀಯ ಪ್ರವಾಸಿ ಕೇಂದ್ರವನ್ನಾಗಿ ಮತ್ತು  ಸ್ವಾತಂತ್ರ್ಯ ಹೋರಾಟಗಾರ ಶ್ರೀ ಸಂಗೊಳ್ಳಿ ರಾಯಣ್ಣ ಮತ್ತು  ಆತನ ಸಮಕಾಲೀನರ ವಿಮರ್ಶಾ ಮತ್ತು ಪ್ರಸಾರ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವ ಹಾಗೂ ನಿರ್ವಹಿಸುವ ದೃಷ್ಟಿಯೊಂದಿಗೆ, ಉಪಬಂಧ ಕಲ್ಪಿಸುವುದು ಯುಕ್ತ ಮತ್ತು ಪಾಸಂಗಿಕವೆಂದು ಪ್ರಾಧಿಕಾರವು ಅಭಿಪ್ರಾಯಪಡುವ ಯಾವುದೇ ಇತರ ವಿಷಯ;

(ಯು) ಪ್ರಾಧಿಕಾರದ ಪ್ರಾದೇಶಿಕ ಪರಿಮಿತಿಯೊಳಗಿನ ಯಾವುದೇ ಐತಿಹಾಸಿಕ ಮತ್ತು ಪಾರಂಪರಿಕ ಸ್ಥಳದಲ್ಲಿ ಮಣ್ಣಿನಲ್ಲಿ ಹೂತು ಹೋಗಿವೆ ಎಂದು ನಂಬಲಾದ ಪ್ರಾಚೀನ ಸ್ಮಾರಕಗಳು ಯಾವುದಾದರೂ ಇದ್ದರೆ, ಅದನ್ನು ಭೂಮಿಯಿಂದ ತೆಗೆಯುವುದಕ್ಕಾಗಿ ಉತ್ಖನನ ಮತ್ತು ಪುರಾತತ್ವದ ಸ್ವರೂಪದ ಪರಿಶೋಧನೆ:

ಪರಂತು, ಈ ಖಂಡದಲ್ಲಿ ಇರುವುದು ಯಾವುದೂ, ಪ್ರಾಚೀನ ಸ್ಮಾರಕಗಳು ಮತ್ತು ಐತಿಹಾಸಿಕ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ ಸಂಖ್ಯೆ: 24) ಉಪಬಂಧಗಳನ್ನು ಅಧ್ಯಾರೋಹಿಸುತ್ತದೆಂದು ಭಾವಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಡಿಯಲ್ಲಿ ಸಿದ್ಧಪಡಿಸಲಾದ ಅಭಿವೃದ್ಧಿ ಯೋಜನೆಯನ್ನು ಆಯುಕ್ತರು ಅನುಮೋದನೆಗಾಗಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ಸರ್ಕಾರವು, ಮಾರ್ಪಾಟುಗಳ ಸಹಿತವಾಗಿ ಅಥವಾ ಯಾವುವೇ ಮಾರ್ಪಾಟುಗಳಿಲ್ಲದೆ ಯೋಜನೆಯನ್ನು ಅನುಮೋದಿಸಬಹುದು.

(3) (2)ನೇ ಉಪಪ್ರಕರಣದಡಿಯ ಅಭಿವೃದ್ಧಿ ಯೋಜನೆಯನ್ನು ಅನುಮೋದಿಸಿದ ತರುವಾಯ ಸರ್ಕಾರವು, ಯೋಜನೆಯಲ್ಲಿ ಪ್ರಾಧಿಕಾರದ ಶಿಫಾರಸ್ಸುಗಳ ಮೇಲೆ ಕಾಲ ಕಾಲಕ್ಕೆ ತಾನು ಅವಶ್ಯಕವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಮಾಡಬಹುದು.

(4) ಈ ಪ್ರಕರಣದಡಿಯಲ್ಲಿ ಸರ್ಕಾರವು ಅನುಮೋದಿಸಿದ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಕಾಮಗಾರಿಗಳನ್ನು ಕೈಗೊಳ್ಳುವ ಮತ್ತು ವೆಚ್ಚವನ್ನು ವಹಿಸುವ ಅಧಿಕಾರವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

**21. ಸಂಗೊಳ್ಳಿ ರಾಯಣ್ಣ ಕ್ಷೇತ್ರದ ನಿರ್ವಹಣೆ.-** ಸರ್ಕಾರವು, ಪ್ರಾಧಿಕಾರದ ಶಿಫಾರಸ್ಸುಗಳ ಮೇಲೆ ಅಥವಾ ಅನ್ಯಥಾ, ಸಂಗೊಳ್ಳಿ ರಾಯಣ್ಣ ಕ್ಷೇತ್ರದ ನಿರ್ವಹಣೆಗಾಗಿ ಪಾರಂಪರಿಕ ತಾಣಗಳು ಸೇರಿದಂತೆ ಪ್ರಾಧಿಕಾರದ ಸ್ವತ್ತುಗಳನ್ನು ಯಾವ ರೀತಿಯಲ್ಲಿ ಬಳಸಿಕೊಳ್ಳಬಹುದು ಎಂಬ ರೀತಿಯನ್ನು, ಪಟ್ಟಣಕ್ಕೆ ಬರುವ ಸಂದರ್ಶಕರು, ಪ್ರವಾಸಿಗರು ಮತ್ತು ಇತರ ಸಂದರ್ಶಕರು ಬಳಸಿಕೊಳ್ಳಬಹುದಾದ ಹಲವಾರು ಸೌಲಭ್ಯಗಳಿಗಾಗಿ ಅವರಿಂದ ವಸೂಲು ಮಾಡಬಹುದಾದ ದರಗಳು, ಶುಲ್ಕಗಳು ಅಥವಾ ಇತರ ವೆಚ್ಚಗಳನ್ನು ಮತ್ತು ಪರಂಪರೆಯ ತಾಣಗಳ ಆವರಣಗಳಿಂದ ಯುಕ್ತವೆನಿಸಬಹುದಾದಂಥ ಇನ್ನಿತರ ವಿಷಯಗಳನ್ನು; ಬಾಡಿಗೆ ಅಥವಾ ನಷ್ಟ ಪರಿಹಾರವನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡುವ ಅಧಿಕಾರ ಇತ್ಯಾದಿಗಳಿಗಾಗಿ ನಿಯಮಗಳ ಮೂಲಕ ಉಪಬಂಧವನ್ನು ಕಲ್ಪಿಸತಕ್ಕದ್ದು.

**22. ಪ್ರಾಧಿಕಾರದ ಅನುಮತಿ ಇಲ್ಲದೆ ಯಾವುದೇ ಇತರ ಪ್ರಾಧಿಕಾರ ಅಥವಾ ವ್ಯಕ್ತಿಯು ಅಭಿವೃದ್ಧಿಯನ್ನು ಕೈಗೊಳ್ಳತಕ್ಕದ್ದಲ್ಲ.-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಪ್ರಾಧಿಕಾರದ ಪೂರ್ವಾನುಮತಿಯ ಹೊರತು, ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿ ಪ್ರಾಧಿಕಾರವು ಕಾಲಕಾಲಕ್ಕೆ ಅಧಿಸೂಚನೆಯನ್ನು ಮೂಲಕ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸುವ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಮಾದರಿಗಳ ಯಾವುದೇ ಅಭಿವೃದ್ಧಿಯನ್ನು ಕೈಗೊಳ್ಳತಕ್ಕದ್ದಲ್ಲ.

(2) ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಅಭಿವೃದ್ಧಿ ಕೈಗೊಳ್ಳಲು, ಅಂಥ ಅಭಿವೃದ್ಧಿಗಾಗಿ ಪ್ರಾಧಿಕಾರವು ಅನುಮತಿಯನ್ನು ನೀಡಿದ್ದ ಹೊರತು, ಯಾವುದೇ ಸ್ಥಳೀಯ ಪ್ರಾಧಿಕಾರವು ಅನುಮತಿಯನ್ನು ನೀಡತಕ್ಕದ್ದಲ್ಲ.

(3) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಅಭಿವೃದ್ಧಿಯನ್ನು ಕೈಗೊಳ್ಳಲು ಇಚ್ಛಿಸುವ ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು, ಅಂಥ ಅಭಿವೃದ್ಧಿಯನ್ನು ಕೈಗೊಳ್ಳಲು ಅನುಮತಿಯನ್ನು ಕೋರಿ ಪ್ರಾಧಿಕಾರಕ್ಕೆ ಲಿಖಿತ ಅರ್ಜಿಯನ್ನು ಸಲ್ಲಿಸತಕ್ಕದ್ದು.

(4) ಪ್ರಾಧಿಕಾರವು, ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ತಾನು ವಿಧಿಸುವುದು ಸೂಕ್ತವೆಂದು ಭಾವಿಸಬಹುದಾದ ಅಂಥ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ ಅಂಥ ಅನುಮತಿಯನ್ನು ನೀಡಬಹುದು ಅಥವಾ ಅಂಥ ಅನುಮತಿಯನ್ನು ನೀಡಲು ನಿರಾಕರಿಸಬಹುದು.

(5) (4)ನೇ ಉಪಪ್ರಕರಣದ ಅಡಿಯಲ್ಲಿಯ ಪ್ರಾಧಿಕಾರದ ತೀರ್ಮಾನದಿಂದ ಬಾಧಿತವಾದ ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು, ತೀರ್ಮಾನದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅಂಥ ತೀರ್ಮಾನದ ವಿರುದ್ಧ ಸರ್ಕಾರಕ್ಕೆ ಅಪೀಲನ್ನು ಸಲ್ಲಿಸಬಹುದು, ಮತ್ತು ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು:

ಪರಂತು, ಅಂಥ ಅಪೀಲನ್ನು ಸಲ್ಲಿಸುವ ಬಾಧಿತ ಪ್ರಾಧಿಕಾರವು, ಕೇಂದ್ರ ಸರ್ಕಾರದ ಆಡಳಿತ ನಿಯಂತ್ರಣದಲ್ಲಿದ್ದರೆ, ರಾಜ್ಯ ಸರ್ಕಾರವು, ಕೇಂದ್ರ ಸರ್ಕಾರದೊಡನೆ ಸಮಾಲೋಚನೆ ನಡೆಸಿದ ತರುವಾಯ ಅಪೀಲನ್ನು ತೀರ್ಮಾನಿಸತಕ್ಕದ್ದು.

(6) ಯಾವೊಬ್ಬ ವ್ಯಕ್ತಿ ಅಥವಾ ಪ್ರಾಧಿಕಾರವು (5)ನೇ ಉಪಪ್ರಕರಣದಲ್ಲಿ ಮಾರ್ಪಡಿಸಲಾದಂತೆ (4)ನೇ ಉಪಪ್ರಕರಣದ ಅಡಿಯಲ್ಲಿ ನೀಡಿದ ತೀರ್ಮಾನಕ್ಕೆ ವಿರುದ್ಧವಾಗಿ ಯಾವುದೇ ಕಾರ್ಯವನ್ನು ಕೈಗೊಂಡಿದ್ದರೆ, ಅಂಥ ತೀರ್ಮಾನಕ್ಕೆ ವಿರುದ್ಧವಾಗಿ ಕೈಗೊಂಡ ಯಾವುದೇ ಅಭಿವೃದ್ಧಿ ಕಾಮಗಾರಿಯನ್ನು ಕೆಡಹುವ, ನಾಶಪಡಿಸುವ ಅಥವಾ ತೆಗೆದುಹಾಕುವ ಅಧಿಕಾರವನ್ನು ಮತ್ತು ಅಂಥ ಕೆಡಹುವ, ನಾಶಪಡಿಸುವ ಅಥವಾ ತೆಗೆದುಹಾಕುವ ವೆಚ್ಚವನ್ನು ಸಂಬಂಧಪಟ್ಟ ವ್ಯಕ್ತಿಯಿಂದ ಅಥವಾ ಆ ಪ್ರಾಧಿಕಾರದಿಂದ ವಸೂಲ್ಮಾಡುವ ಅಧಿಕಾರವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

**23. ಪ್ರವೇಶಿಸುವ ಅಧಿಕಾರ.–** ಪ್ರಾಧಿಕಾರವು,–

(ಎ) ಯಾವುದೇ ಭೂಮಿ ಅಥವಾ ಕಟ್ಟಡದ ಯಾವುದೇ ತನಿಖೆ, ಪರಿಶೀಲನೆ ಮಾಪನ ಅಥವಾ ಸರ್ವೆ ಅಥವಾ ಮಟ್ಟ ಮಾಡುವ ಉದ್ದೇಶಕ್ಕಾಗಿ;

(ಬಿ) ಚರಂಡಿ ಮತ್ತು ಒಳಚರಂಡಿಗಳ ಮಾರ್ಗದಲ್ಲಿ ನಿರ್ಮಾಣವಾಗುತ್ತಿರುವ ಕಾಮಗಾರಿಯನ್ನು ಪರೀಕ್ಷಿಸುವ ಉದ್ದೇಶಕ್ಕಾಗಿ ಮತ್ತು ಆ ಮಾರ್ಗವನ್ನು ದೃಢಪಡಿಸಿಕೊಳ್ಳುವ ಉದ್ದೇಶಕ್ಕಾಗಿ;

(ಸಿ) ಒಳಮಣ್ಣನ್ನು ಅಗೆಯುವ ಅಥವಾ ಕೊರೆಯುವ ಉದ್ದೇಶಕ್ಕಾಗಿ;

(ಡಿ) ಸರಹದ್ದುಗಳನ್ನು ಹಾಕುವ ಮತ್ತು ಕಾಮಗಾರಿಯ ಉದ್ದೇಶಿತ ಗೆರೆಗಳನ್ನು ಹಾಕುವ ಉದ್ದೇಶಕ್ಕಾಗಿ;

(ಇ) ಗುರುತುಗಳನ್ನು ಹಾಕುವ ಮೂಲಕ ಮತ್ತು ಕಂದಕಗಳನ್ನು ತೋಡುವ ಮೂಲಕ ಅಂಥ ಮಟ್ಟಗಳನ್ನು, ಸರಹದ್ದುಗಳನ್ನು ಮತ್ತು ಗೆರೆಗಳನ್ನು ಮಾಡುವ ಉದ್ದೇಶಕ್ಕಾಗಿ;

(ಎಫ್) ಯಾವ ಯೋಜನೆ ಅಥವಾ ಷರತ್ತುಗಳಿಗೊಳಪಟ್ಟು ಅನುಮತಿಯನ್ನು ನೀಡಲಾಗಿತ್ತೋ ಆ ಯೋಜನೆ ಅಥವಾ ಷರತ್ತುಗಳನ್ನು ಉಲ್ಲಂಘಿಸಿ ಯಾವುದೇ ಭೂಮಿಯ ಅಭಿವೃದ್ಧಿ ಕಾರ್ಯವನ್ನು ಮಾಡಲಾಗಿದೆಯೇ ಅಥವಾ ಮಾಡಲಾಗುತ್ತಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ; ಅಥವಾ

(ಜಿ) ಈ ಅಧಿನಿಯಮದ ಸಮರ್ಥ ಅನುಷ್ಠಾನಕ್ಕಾಗಿ ಯಾವುದೇ ಅಗತ್ಯ ಕಾರ್ಯವನ್ನು ನಿರ್ವಹಿಸುವ ಉದ್ದೇಶಕ್ಕಾಗಿ,

– ಯಾವುದೇ ಭೂಮಿ ಅಥವಾ ಕಟ್ಟಡವನ್ನು ಸಹಾಯಕರು ಅಥವಾ ಕೆಲಸಗಾರರೊಂದಿಗೆ ಅಥವಾ ತಾವೊಬ್ಬರೇ ಪ್ರವೇಶಿಸುವುದಕ್ಕೆ ಯಾವೊಬ್ಬ ವ್ಯಕ್ತಿಗೆ ಅಧಿಕಾರವನ್ನು ನೀಡಬಹುದು:

ಪರಂತು,–

(i) ಸೂರ್ಯೋದಯ ಹಾಗೂ ಸೂರ್ಯಾಸ್ತದ ನಡುವಣ ಅವಧಿಯನ್ನು ಹೊರತುಪಡಿಸಿ ಮತ್ತು ಅಧಿಭೋಗದಾರನಿಗೆ ಅಥವಾ ಅಧಿಭೋಗದಾರ ಇಲ್ಲದಿದ್ದರೆ ಆ ಭೂಮಿಯ ಅಥವಾ ಕಟ್ಟಡದ ಮಾಲೀಕನಿಗೆ ಯುಕ್ತ ನೋಟೀಸು ನೀಡದೆ ಅಂಥ ಪ್ರವೇಶವನ್ನು ಮಾಡತಕ್ಕದ್ದಲ್ಲ;

(ii) ಪ್ರತಿಯೊಂದು ಸಂದರ್ಭದಲ್ಲಿಯೂ ಅಂಥ ಭೂಮಿ ಅಥವಾ ಕಟ್ಟಡದಿಂದ, ಅಲ್ಲಿ ಮಹಿಳೆಯರು ಮತ್ತು ಮಕ್ಕಳೇನಾದರೂ ಇದ್ದರೆ, ಅವರಿಗೆ ಹೊರಹೋಗುವುದಕ್ಕೆ, ಸಾಧ್ಯವಾಗುವಂತೆ ಯುಕ್ತ ಅವಕಾಶವನ್ನು ನೀಡತಕ್ಕದ್ದು.

(iii) ಆ ಭೂಮಿ ಅಥವಾ ಕಟ್ಟಡದ ಅಧಿಭೋಗದಾರನ ಸಾಮಾಜಿಕ ಮತ್ತು ಧಾರ್ಮಿಕ ಬಳಕೆಯ ಪ್ರವೇಶಕ್ಕೆ ಸಂಬಂಧಿಸಿದಂತೆ, ಯಾವ ಉದ್ದೇಶಕ್ಕಾಗಿ ಪ್ರವೇಶಿಸಲಾಗಿದೆಯೋ ಆ ಉದ್ದೇಶದ ಜರೂರು ಅವಶ್ಯಕತೆಗಳೇನಿದೆ ಎಂಬ ಬಗ್ಗೆ ಯಾವಾಗಲೂ ಸಾಧ್ಯವಾದಷ್ಟು ಮಟ್ಟಿಗೆ ಯುಕ್ತ ಗಮನವನ್ನು ನೀಡಿರತಕ್ಕದ್ದು.

**24. ಶುಲ್ಕವನ್ನು ವಿಧಿಸುವುದು :–** 22ನೇ ಪ್ರಕರಣದ ಅಡಿಯಲ್ಲಿ ಅನುಮತಿಗಳನ್ನು ನೀಡುವುದಕ್ಕಾಗಿ ವಿನಿಮಯಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ದರದಲ್ಲಿ ಶುಲ್ಕವನ್ನು ವಿಧಿಸಲು ಪ್ರಾಧಿಕಾರಕ್ಕೆ ಕಾನೂನುಬದ್ಧ ಅಧಿಕಾರವಿರತಕ್ಕದ್ದು.

**25. ಪ್ರಾಧಿಕಾರಕ್ಕೆ ಸರ್ಕಾರದ ಅಧಿಕಾರಗಳ ಪ್ರತ್ಯಾಯೋಜನೆ.–** ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕ ಹಾಗೂ ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ, 1961ರಲ್ಲಿ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 7) ಏನೇ ಇದ್ದರೂ, ಸರ್ಕಾರವು ಅಧಿಸೂಚನೆಯ ಮೂಲಕ ತಾನು ಚಲಾಯಿಸಬಹುದಾದ ಯಾವುದೇ ಅಧಿಕಾರಗಳನ್ನು ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಬಹುದು ಮತ್ತು ಇಂತಹ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಪ್ರಾಧಿಕಾರವು, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**26. ಬೀದಿ ಮುಂತಾದುವುಗಳ ನಿರ್ವಹಣೆಯ ಕರ್ತವ್ಯ.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರಲ್ಲಿ (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22) ಏನೇ ಇದ್ದರೂ, ಈ ಮುಂದಿನ, ಎಂದರೆ:–

(ಎ) ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿ ಬೀದಿಗಳ ನಿರ್ವಹಣೆ, ದುರಸ್ತಿ ಮಾಡಿಸುವುದು, ಬೀದಿ ದೀಪಗಳನ್ನು ಅಳವಡಿಸುವುದು ಮತ್ತು ಸ್ವಚ್ಛಗೊಳಿಸುವ;

(ಬಿ) ಸಂಗೊಳ್ಳಿ ರಾಯಣ್ಣ ಕ್ಷೇತ್ರದಲ್ಲಿ ಬೀದಿಗಳ ಸಂಬಂಧದಲ್ಲಿ ಚರಂಡಿ, ನೈರ್ಮಲ್ಯ ವ್ಯವಸ್ಥೆ ಮತ್ತು ನೀರು ಸರಬರಾಜು ಮಾಡುವ,

– ವಿಷಯಗಳಿಗೆ ಸಂಬಂಧಿಸಿದಂತೆ ತಾನು ಕಾನೂನುಬದ್ಧವಾಗಿ ಬಳಸಬಹುದಾದ ಯಾವುದೇ ಸಾಧನ ಅಥವಾ ತೆಗೆದುಕೊಳ್ಳಬಹುದಾದ ಯಾವುದೇ ಕ್ರಮದ ಮೂಲಕ ಸಮಂಜಸವಾದ ಮತ್ತು ಸಮರ್ಪಕವಾದ ಉಪಬಂಧಗಳನ್ನು ರಚಿಸುವುದು ಪ್ರಾಧಿಕಾರದ ಕರ್ತವ್ಯವಾಗಿರತಕ್ಕದ್ದು.

**27. 1974ರ ಕರ್ನಾಟಕ ಅಧಿನಿಯಮ 32ನ್ನು ಪ್ರಾಧಿಕಾರದ ಆವರಣಗಳಿಗೆ ಅನ್ವಯಿಸುವುದು.–**(1) ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಅಧಿಸೂಚನೆಯ ಮೂಲಕ ಅಂತಹ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ನ್ನು ಪ್ರಾಧಿಕಾರಕ್ಕೆ ಸೇರಿದ, ಅದರಲ್ಲಿ ನಿಹಿತವಾದ ಅಥವಾ ಅದು ಗುತ್ತಿಗೆಗೆ ತೆಗೆದುಕೊಂಡ ಆವರಣಕ್ಕೆ, ಸಾರ್ವಜನಿಕ ಆವರಣಗಳಿಗೆ ಅನ್ವಯಿಸುವಂತೆಯೇ ಅನ್ವಯಿಸತಕ್ಕದ್ದೆಂದು ಉಪಬಂಧವನ್ನು ಕಲ್ಪಿಸಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸಿದ ತರುವಾಯ, ಮೇಲ್ಕಂಡ ಅಧಿನಿಯಮ ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳು, ಪ್ರಾಧಿಕಾರದ ಆವರಣಗಳಿಗೆ ಈ ಮುಂದಿನ ಮಾರ್ಪಾಡುಗಳೊಡನೆ ಅನ್ವಯಿಸತಕ್ಕದ್ದು, ಎಂದರೆ:–

(ಎ) ಸರ್ಕಾರವು, ತಾನು ಸೂಕ್ತವೆಂದು ಭಾವಿಸುವಂತೆ ಸರ್ಕಾರದ ಅಥವಾ ಪ್ರಾಧಿಕಾರದ ಯಾವೊಬ್ಬ ಅಧಿಕಾರಿಯನ್ನು ಮೇಲ್ಕಂಡ ಅಧಿನಿಯಮದ ಉದ್ದೇಶಗಳಿಗಾಗಿ ಸಕ್ಷಮ ಅಧಿಕಾರಿಯೆಂದು ನೇಮಿಸಬಹುದು;

(ಬಿ) ಆ ಅಧಿನಿಯಮದಲ್ಲಿ ಮತ್ತು ಆ ನಿಯಮಗಳಲ್ಲಿ "ಸಾರ್ವಜನಿಕ ಆವರಣಗಳಿಗೆ" ಮಾಡಿದ ಉಲ್ಲೇಖಗಳನ್ನು ಪ್ರಾಧಿಕಾರದ ಆವರಣಗಳಿಗೆ ಮಾಡಿದ ಉಲ್ಲೇಖಗಳೆಂದು ಭಾವಿಸತಕ್ಕದ್ದು ಮತ್ತು ಆ ಅಧಿನಿಯಮದ 6, 7, 8, 14, 15, 16 ಮತ್ತು 17ನೇ ಪ್ರಕರಣಗಳಲ್ಲಿ "ರಾಜ್ಯ ಸರ್ಕಾರಕ್ಕೆ" ಮಾಡಿದ ಉಲ್ಲೇಖಗಳನ್ನು ಪ್ರಾಧಿಕಾರಕ್ಕೆ ಮಾಡಿದ ಉಲ್ಲೇಖಗಳೆಂದು ಭಾವಿಸತಕ್ಕದ್ದು.

**28. ಪ್ರವಾಸೋದ್ಯಮಕ್ಕೆ ಉತ್ತೇಜನವನ್ನು ನೀಡುವುದು.–** ಈ ಪಾರಂಪರಿಕ ತಾಣಗಳಿಗೆ ವ್ಯಾಪಕ ಪ್ರಚಾರವನ್ನು ನೀಡಲು ಪ್ರವಾಸೋದ್ಯಮ, ಸಾಂಸ್ಕೃತಿಕ ಮತ್ತು ಐತಿಹಾಸಿಕ ಪಾರಂಪರಿಕ ಕೇಂದ್ರಗಳಿಗೆ ಉತ್ತೇಜನವನ್ನು ನೀಡುವುದಕ್ಕಾಗಿ ಪ್ರಾಧಿಕಾರವು ಕಾರ್ಯಕ್ರಮಗಳನ್ನು ಮತ್ತು ಕಾರ್ಯಚಟುವಟಿಕೆಗಳನ್ನು ಆಯೋಜಿಸಬಹುದು. ಅಂಥ ಕಾರ್ಯಕ್ರಮಗಳು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು,–

(ಎ) ಸಂಗೊಳ್ಳಿ ರಾಯಣ್ಣನ ಜಯಂತ್ಯೋತ್ಸವ;

(ಬಿ) ಸಂಗೊಳ್ಳಿ ರಾಯಣ್ಣನ ಹುತಾತ್ಮ ದಿನಾಚರಣೆ;

(ಸಿ) ಕಲಾ ಪ್ರದರ್ಶನಗಳು ಮತ್ತು ಮಾರಾಟಗಳು.

(ಡಿ) ಸಮ್ಮೇಳನಗಳು, ವಿಚಾರಗೋಷ್ಠಿಗಳು, ಕಾರ್ಯಾಗಾರಗಳು.

(ಇ) ವಾರ್ಷಿಕ ಜಾತ್ರೆಗಳು ಮತ್ತು ವಿಶೇಷ ಸ್ವರೂಪದ ಉತ್ಸವಗಳು.

**29. ಅಧಿಕಾರಗಳ ಪ್ರತ್ಯಾಯೋಜನೆ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, 44ನೇ ಪ್ರಕರಣದ ಅಡಿಯಲ್ಲಿ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಯಾವುದೇ ಇತರ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಬಹುದು.

(2) ಪ್ರಾಧಿಕಾರವು, ವಿನಿಯಮಗಳ ಮೂಲಕ, 45ನೇ ಪ್ರಕರಣದ ಅಡಿಯಲ್ಲಿ ವಿನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಆಯುಕ್ತರಿಗೆ ಅಥವಾ ಪ್ರಾಧಿಕಾರದ ಇತರ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಬಹುದು.

## ಅಧ್ಯಾಯ – IV
## ಹಣಕಾಸು ಮತ್ತು ಸ್ವತ್ತು

**30. ಪ್ರಾಧಿಕಾರದ ನಿಧಿ.–** (1) ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ನಿಧಿಯೆಂದು ಕರೆಯಲಾಗುವ ಒಂದು ನಿಧಿಯು ಇರತಕ್ಕದ್ದು.

(2) ಸದರಿ ನಿಧಿಗೆ,–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಗಮಿತವಾದ ಇಲ್ಲವೇ ನಿಗಮಿತವಲ್ಲದ ಯಾವುದೇ ನಿಕಾಯ ಅಥವಾ ಯಾವೊಬ್ಬ ವ್ಯಕ್ತಿಯು ನೀಡಿದ ಎಲ್ಲ ಅನುದಾನಗಳು, ಸಹಾಯಧನಗಳು, ದೇಣಿಗೆಗಳು ಮತ್ತು ಕೊಡುಗೆಗಳನ್ನು;

(ii) ಪ್ರಾಧಿಕಾರವು ಸಾಲ ಪಡೆದ ಮೊಬಲಗನ್ನು; ಮತ್ತು

(iii) ಯಾವುದೇ ಮೂಲದಿಂದಾಗಲಿ, ಪ್ರಾಧಿಕಾರವು ಅಥವಾ ಪ್ರಾಧಿಕಾರದ ಪರವಾಗಿ ಪಡೆದುಕೊಂಡ ಇತರ ಎಲ್ಲಾ ಮೊತ್ತಗಳನ್ನು,

– ಜಮೆ ಮಾಡತಕ್ಕದ್ದು;

(3) ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು ನಿಧಿಗೆ ಜಮೆ ಮಾಡಲಾದ ಎಲ್ಲ ಹಣವನ್ನು ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಸರ್ಕಾರದ ಖಜಾನೆಯಲ್ಲಿ ಇರಿಸತಕ್ಕದ್ದು.

(4) ಪ್ರಾಧಿಕಾರದ ಆಯುಕ್ತರಿಗೆ ಮತ್ತು ಇತರ ಅಧಿಕಾರಿಗಳಿಗೆ ಮತ್ತು ನೌಕರರಿಗೆ ಸಂದಾಯ ಮಾಡಬೇಕಾದ ವೇತನಗಳು, ಭತ್ಯೆಗಳು ಮತ್ತು ನಿವೃತ್ತಿ ವೇತನವೇನಾದರೂ ಇದ್ದಲ್ಲಿ ಅದನ್ನೂ ಒಳಗೊಂಡಂತೆ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**31. ನಿಧಿಯ ಬಳಕೆ.–** ನಿಧಿಯನ್ನು ಮತ್ತು ಪ್ರಾಧಿಕಾರವು ಹೊಂದಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಎಲ್ಲ ಸ್ವತ್ತನ್ನು ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಬಳಸಿಕೊಳ್ಳತಕ್ಕದ್ದು.

**32. ಸರ್ಕಾರದಿಂದ ಅನುದಾನ.–** ಪ್ರಾಧಿಕಾರವು ತನ್ನದೇ ಸಂಪನ್ಮೂಲಗಳಿಂದ ಸ್ವಯಂ ನಿರ್ವಹಣೆ ಮಾಡಿಕೊಳ್ಳುವ ಹಂತವನ್ನು ತಲುಪುವವರೆಗೆ ಅದರ ಆಡಳಿತಾತ್ಮಕ ವೆಚ್ಚಗಳಿಗೆ ಸಮನಾದ ಮೊತ್ತವನ್ನು ಅನುದಾನದ ರೂಪದಲ್ಲಿ ಸರ್ಕಾರವು ಪ್ರತಿ ವರ್ಷವೂ ಪ್ರಾಧಿಕಾರಕ್ಕೆ ನೀಡತಕ್ಕದ್ದು.

**33. ಪ್ರಾಧಿಕಾರದ ಆಯವ್ಯಯ.–** (1) ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಮುಂಬರುವ ಏಪ್ರಿಲ್ ಒಂದನೆಯ ದಿನಾಂಕದಂದು ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ಆದಾಯ ಮತ್ತು ವೆಚ್ಚದ ಆಯವ್ಯಯ ಅಂದಾಜನ್ನು ಪ್ರಾಧಿಕಾರವು ಪ್ರತಿ ವರ್ಷವೂ ಸಿದ್ಧಪಡಿಸತಕ್ಕದ್ದು ಮತ್ತು ಸರ್ಕಾರಕ್ಕೆ ಮಂಜೂರಾತಿಗಾಗಿ ಕಳುಹಿಸತಕ್ಕದ್ದು. ಪ್ರಾಧಿಕಾರವು,

